

# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೧೨–೧೩ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ನೇಮಿಚಂದ್ರರವರ ಸಣ್ಣಕತೆಗಳ ಒಂದು ಅಧ್ಯಯನ


ನಿಬಂಧಕಾರರು

**ಕೆಂಡಗಣ್ಣಸ್ವಾಮಿ ಬಿ.ಎನ್.**

ನೋಂದಣಿ ಸಂಖ್ಯೆ : KVTMKS - 00601

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ.)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಡಿ. ಸುಮಂಗಳ
ಕನ್ನಡ ಸಹ ಪ್ರಾಧ್ಯಾಪಕರು,
ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು





**ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
**ಜಯಲಕ್ಷ್ಮೀಪುರಂ, ಮೈಸೂರು**

೨೦೧೨ – ೧೩



# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೧೨–೧೩ನೇ ಸಾಲಿನ ಎಂ.ಫಿಲ್. ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ನೇಮಿಚಂದ್ರರವರ ಸಣ್ಣಕತೆಗಳ ಒಂದು ಅಧ್ಯಯನ

ನಿಬಂಧಕಾರರು

**ಕೆಂಡಗಣ್ಣಸ್ವಾಮಿ ಬಿ.ಎನ್.**

ನೋಂದಣಿ ಸಂಖ್ಯೆ : KVTMKS - 00601

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ.)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಡಿ. ಸುಮಂಗಳ
ಕನ್ನಡ ಸಹ ಪ್ರಾಧ್ಯಾಪಕರು,
ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು

**ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
**ಜಯಲಕ್ಷ್ಮೀಪುರಂ, ಮೈಸೂರು**

೨೦೧೨ – ೧೩

# ದೃಢೀಕರಣ ಪ್ರಮಾಣಪತ್ರ

೨೦೧೨-೧೩ನೇ ಸಾಲಿನಲ್ಲಿ ಕ್ರಮಸಂಖ್ಯೆ KVTMKS-00601ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ **ಕೆಂಡಗಣ್ಣಸ್ವಾಮಿ ಬಿ.ಎನ್.** ಅವರು ನನ್ನ ಮಾರ್ಗದರ್ಶನದಲ್ಲಿ **"ನೇಮಿಚಂದ್ರರವರ ಸಣ್ಣಕತೆಗಳ ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಳಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಮೈಸೂರು
ದಿನಾಂಕ : ೨೨-೦೭-೨೦೧೩

**(ಡಾ. ಡಿ. ಸುಮಂಗಳ)**
**ಕನ್ನಡ ಸಹ ಪ್ರಾಧ್ಯಾಪಕರು, ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು**

# ಅಭ್ಯರ್ಥಿಯ ಘೋಷಣಾ ಪತ್ರ

**"ನೇಮಿಚಂದ್ರರವರ ಸಣ್ಣಕತೆಗಳ ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮಸಂಖ್ಯೆ KVTMKS - 00601 ವಿದ್ಯಾರ್ಥಿ ಆದ ನಾನು ೨೦೧೨-೧೩ನೇ ಸಾಲಿನ ಪರೀಕ್ಷೆಗಾಗಿ **ಡಾ. ಡಿ.ಸುಮಂಗಳ, ಕನ್ನಡ ಸಹ ಪ್ರಾಧ್ಯಾಪಕರು, ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು** ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ಮೈಸೂರು

ದಿನಾಂಕ: ೨೨-೦೭-೨೦೧೩

**(ಕೆಂಡಗಣ್ಣಸ್ವಾಮಿ ಬಿ.ಎನ್.)**

೨೦೧೨-೧೩ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು.

# ನೇಮಿಚಂದ್ರರವರ ಕತೆಗಳ ಒಂದು ಅಧ್ಯಯನ

## ಪರಿವಿಡಿ



*****

# ಅಧ್ಯಾಯ – ೧

# ಅಧ್ಯಯನ ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯದಲ್ಲಿ ಆಧುನಿಕ ಚರಿತ್ರೆ ವ್ಯಾಪಕವಾಗಿ, ವೈವಿಧ್ಯಪೂರ್ಣವಾಗಿ ನಡೆಯುತ್ತ ಬಂದಿದೆ. ಆಯಾ ಕಾಲದ ಸನ್ನಿವೇಶ, ಸಂದರ್ಭಕ್ಕೆ ತಕ್ಕಂತೆ ಸೃಜನಾತ್ಮಕ ಚಿಂತನೆಯ ಜೊತೆ ಜೊತೆಗೆ ಹೊಸತನವು ಮೂಡಿಬಂದಿದೆ ಎಂದು ಹೇಳಬಹುದು. ಆಯಾ ಕಾಲದ ಹೊಸತನ ಅಥವಾ ವೈಶಿಷ್ಟ್ಯ ಏನೇ ಇರಲಿ, ಹತ್ತೊಂಬತ್ತನೆಯ ಶತಮಾನ ನಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಅನೇಕ ದೃಷ್ಟಿಯಿಂದ ಪುನರುಜ್ಜೀವನದ ಮತ್ತು ಸೃಜನಾತ್ಮಕ ಚಿಂತನೆಯ ಮುಖ್ಯ ಕಾಲಘಟ್ಟವಾಗಿದೆ. ಈ ಸಂದರ್ಭದಲ್ಲಿಯೇ ಸಣ್ಣಕತೆಯ ಚರಿತ್ರೆ ಆರಂಭವಾದದ್ದು.

ಕನ್ನಡದಲ್ಲಿ ಕಾದಂಬರಿಯ ತರುವಾಯ ಸಣ್ಣಕತೆಯೇ ಅತ್ಯಂತ ಲೋಕಪ್ರಿಯವಾದ ಸಾಹಿತ್ಯ ಪ್ರಕಾರವಾಗಿದೆ. ಈ ಮಾತು ಭಾರತದ ಉಳಿದೆಲ್ಲ ಪ್ರಾಂತ್ಯಗಳ ಸಾಹಿತ್ಯಗಳಿಗೂ ಅನ್ವಯಿಸುತ್ತದೆ. ಮನುಷ್ಯನಿಗಿರುವ ಸಹಜವಾದ ಕುತೂಹಲವು ಕತೆಯನ್ನು ಮೆಚ್ಚಿಕೊಳ್ಳುವಂತೆ ಮಾಡಿದೆ.

ಹೊಸಗನ್ನಡದಲ್ಲಿ ಅನೇಕ ಬಗೆಯ ಸಣ್ಣಕತೆಗಳು ಮೂಡಿಬಂದಿವೆ. ದಿನಪತ್ರಿಕೆ ಮತ್ತು ಮಾಸಪತ್ರಿಕೆಗಳಲ್ಲಿ ಸಣ್ಣಕತೆಗಳು ಸ್ಥಾನ ಪಡೆದುಕೊಂಡಿವೆ. ಹಿಂದಿನ ಯಾವ ಕಾಲಘಟ್ಟದಲ್ಲಿಯೂ ಈ ಬಗೆಯ ಸಾಹಿತ್ಯ ಸೃಷ್ಟಿ ನಡೆದಿರಲಿಲ್ಲ. ಸರಳ, ನೇರ ನಿರೂಪಣೆಯ ಕತೆಗಳು ಚಿಕ್ಕದಾಗಿ ಚೊಕ್ಕವಾಗಿ ಮೂಡಿಬಂದು ಹೊಸ ಓದುಗ ವರ್ಗ ಈ ಸಂದರ್ಭದಲ್ಲಿ ಸೃಷ್ಟಿಯಾಯಿತು.

ಸಣ್ಣಕತೆಯ ತಂತ್ರವ್ಯಾಪ್ತಿ, ಬರವಣಿಗೆಯ ರೀತಿ, ಅದರ ಒಟ್ಟಂದದ ಪರಿಣಾಮದ ನಿರೂಪಣೆಯ ರೀತಿ ಅತಿ ಮುಖ್ಯವಾದದ್ದು. ಅತ್ಯಂತ ಕಡಿಮೆ ಅವಧಿಯಲ್ಲಿ ಯಾವುದೇ ಒಂದು ಸುಖ, ದುಃಖ, ಯಾತನೆ ಸನ್ನಿವೇಶಗಳು ಅಭಿವ್ಯಕ್ತವಾಗುವುದರಿಂದ ಸಣ್ಣಕತೆಗಳು ಜನಪ್ರಿಯತೆಯನ್ನು ಪಡೆದುಕೊಂಡಿವೆ. ಆಧುನಿಕ ಕನ್ನಡ ಸಾಹಿತ್ಯ ಪ್ರಕಾರವಾದ ಈ ಸಣ್ಣಕತೆಯ ಬಗ್ಗೆ ಓದುಗವರ್ಗದ ಆಸಕ್ತಿ ಮತ್ತು ಉತ್ಸಾಹವೇ ಆಗಿನ ಕಾಲದ ಎಷ್ಟೋ ಸಣ್ಣಕತೆಗಳ ಉಗಮಕ್ಕೆ ಕಾರಣವಾಗಿದೆ.

ಸಂಕ್ಷಿಪ್ತ ಗದ್ಯ ನಿರೂಪಣೆ ಎನಿಸಿಕೊಂಡ ಸಣ್ಣಕತೆಗಳು ಒಂದು ಅಥವಾ ಅರ್ಧ ತಾಸಿನಲ್ಲಿ ಓದಿ ಮುಗಿಸುವಂಥದ್ದು, ಯಾವುದಾದರೂ ಘಟನೆ, ಪಾತ್ರ ಅಥವಾ ಭಾವನೆಯನ್ನು ಕೇಂದ್ರವಾಗಿರಿಸಿಕೊಂಡು ರಚಿಸುವ ಸಣ್ಣಕತೆಗಳಲ್ಲಿ ತತ್ವಗಳಿರಬಾರದು,

ಸಣ್ಣಕತೆಗಳಲ್ಲಿ ಪರಿಣಾಮ ಮುಖ್ಯ ಘಟ್ಟವಾಗಿರುತ್ತದೆ. ಇಲ್ಲಿ ಭ್ರಮೆ, ವಾಸ್ತವಿಕತೆ ಮತ್ತು ಸಹಜತೆ ಹೀಗೆ ಯಾವ ಮಾರ್ಗದಲ್ಲಿ ಬೇಕಾದರೂ ರಚಿಸಬಹುದು. ಅರ್ಥಪೂರ್ಣ ಆರಂಭ ಮತ್ತು ಸಮಂಜಸ ಅಂತ್ಯ ಮುಖ್ಯವೆಂದು ವಿಮರ್ಶಕರು ಅಭಿಪ್ರಾಯ-ಪಡುತ್ತಾರೆ.

ಸಣ್ಣಕತೆಯು ಕನ್ನಡ ಸಾಹಿತ್ಯದ ಕೃಷಿಯಲ್ಲಿ ತನ್ನದೇ ಆದಂತಹ ಉನ್ನತ ಸ್ಥಾನವನ್ನು ಹೊಂದಿದೆ. ಕಾವ್ಯ, ಸಂಗೀತ, ನಾಟಕ, ಕಥನಕಾವ್ಯ, ಪ್ರಬಂಧ, ಆತ್ಮಕಥನ, ಕಾದಂಬರಿ, ಲಲಿತಕಲೆ ಇನ್ನೂ ಮೊದಲಾದ ಸಾಹಿತ್ಯದ ರೂಪಗಳಂತೆ ಸಣ್ಣಕತೆಯು ಕನ್ನಡ ಸಾಹಿತ್ಯದ ವಿಶಿಷ್ಟ ಪ್ರಕಾರವಾಗಿ ನಿಲ್ಲುವುದರಲ್ಲಿ ಎರಡು ಮಾತಿಲ್ಲ.

ಪ್ರಾಚೀನ ಸಾಹಿತ್ಯದ ಸಣ್ಣಕತೆಗಳಿಗೂ ಹಾಗೂ ಆಧುನಿಕ ಸಾಹಿತ್ಯದ ಸಣ್ಣಕತೆಗಳಿಗೂ ಹೋಲಿಕೆ ಮಾಡಿದಾಗ ವಿವಿಧ ಬಗೆಯ ವ್ಯತ್ಯಾಸಗಳನ್ನು ಗುರುತಿಸಬಹುದು. ಪ್ರಾಚೀನ ಸಾಹಿತ್ಯ ಕಥಾ ಪ್ರಪಂಚದಲ್ಲಿ ಪಂಚತಂತ್ರ, ವಡ್ಡಾರಾಧನೆ, ಧರ್ಮಾಮೃತ, ಕಾದಂಬರಿ, ರಾಮಾಯಣ, ಮಹಾಭಾರತ ಇನ್ನೂ ಅನೇಕ ಕೃತಿಗಳಲ್ಲಿ ಕಥಾ ಇತಿಹಾಸವನ್ನು ನೋಡಬಹುದಾಗಿದೆ.

ಪ್ರಾಚೀನ ಸಾಹಿತ್ಯದ ಕಥಾ ಪ್ರಪಂಚದಲ್ಲಿ ಧಾರ್ಮಿಕತೆಗೆ ಹಾಗೂ ಸಂಬಂಧಪಟ್ಟಂತಹ ವಸ್ತು, ಪಾತ್ರ, ಸನ್ನಿವೇಶ, ಸಂದರ್ಭಕ್ಕೆ ತಕ್ಕಂತೆ ಧರ್ಮದ ಭಾವನೆಗಳಿಗೆ ಸಂಬಂಧಪಟ್ಟಿರುವುದು ಗಮನಾರ್ಹವಾದದ್ದು.

ಕತೆಗಳು ವ್ಯಕ್ತಿಯ ವ್ಯಕ್ತಿತ್ವವನ್ನು ಸೊಗಸಾಗಿ ಚಿತ್ರಿಸಬಲ್ಲದು. ಈ ದಿಶೆಯಲ್ಲಿ ಕತೆಗಳು ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿವೆ. ಕತೆಗಳು ಸಾಮಾನ್ಯವಾಗಿ ವ್ಯಕ್ತಿಯ ವ್ಯಕ್ತಿತ್ವದೊಂದಿಗೆ ಬೆಸೆದುಕೊಂಡಿದೆ. ಉದಾಹರಣೆಗೆ ಹಿಂಸೆ–ಅಹಿಂಸೆ, ಗುಣ–ಅವಗುಣಗಳು ಜೀವನ, ಭೋಗ, ಸ್ವರ್ಗ, ನರಕ, ಯಾತನೆ, ಭಾವನೆ, ಅಂತರಾತ್ಮ ನೀತಿ–ನಿಯಮ, ಇಹ–ಪರ, ಸಚ್ಚಾರಿತ್ರ್ಯ ಹೀಗೆ ಅನೇಕ ಪರಿಕಲ್ಪನೆಗಳು ತನ್ನದೇ ಆದಂತಹ ವೇದಿಕೆಯನ್ನು ಸೃಷ್ಟಿಸುವುದೇ ಸಣ್ಣಕತೆಗಳು ಎಂದು ಹೇಳಿದರೆ ತಪ್ಪಾಗಲಾರದು.

ಸಾಂಸ್ಕೃತಿಕ ದೃಷ್ಟಿಯಿಂದ ಸಣ್ಣಕತೆಯು ಮುಖ್ಯವಾದದ್ದು, ಹೀಗೆ ವಿಭಿನ್ನ ಧೋರಣೆ, ಭಾವನೆಗಳು, ನಿಲುವುಗಳನ್ನು ಹೊಂದಿರುವ ಕನ್ನಡ ಪ್ರಾಚೀನ ಕತೆಯ ಸ್ವರೂಪ ಮತ್ತು ಲಕ್ಷಣಗಳು ಇತ್ತೀಚಿನ ಸಣ್ಣಕತೆಗಳಿಗಿಂತ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಹೊಸಗನ್ನಡದ ಸಮೃದ್ಧವಾದ ಸಾಹಿತ್ಯ ಪ್ರಕಾರದಲ್ಲಿ "ಸಣ್ಣಕತೆ"

ಒಂದು. ಪಾಶ್ಚಾತ್ಯ ಸಾಹಿತ್ಯ ಸಂಪರ್ಕದಿಂದ ಈ ಪರಿಭಾಷೆ ಹುಟ್ಟಿಬಂದಿದೆ. ಗದ್ಯ ಪ್ರಕಾರದಲ್ಲಿ ಗಮನ ಸೆಳೆಯುವ ಸಣ್ಣಕತೆಯು 'ರೂಪದಲ್ಲಿ ಚಿಕ್ಕದು'.

೧೬ನೇ ಶತಮಾನದಿಂದಲೇ ಬ್ರಿಟೀಷರು ಭಾರತಕ್ಕೆ ವ್ಯಾಪಾರದ ದೃಷ್ಟಿಯಿಂದ ಬಂದು ನೆಲೆಯೂರಿದರು. ಜೊತೆಗೆ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಹೀಗೆ ಮೊದಲಾದ ರಾಷ್ಟ್ರಗಳು ಸಾಮ್ರಾಜ್ಯ ಅರಸುಗಳಾಗಿ ತದನಂತರ ಭಾರತೀಯರ ಮೇಲೆ ಅವರ ಸಂಸ್ಕೃತಿ, ಆಚಾರ-ವಿಚಾರಗಳನ್ನು, ಧರ್ಮದ ಕಟ್ಟುಪಾಡುಗಳನ್ನು, ಭಾಷೆಯನ್ನು, ಸಂಪ್ರದಾಯಗಳನ್ನು, ಶಿಕ್ಷಣದ ಮತ್ತು ಬದುಕಿನ ಮೂಲಕ ಹೇರಲು ಪ್ರಯತ್ನಿಸಿ ಯಶಸ್ವಿಯಾದರು. ಜೊತೆಗೆ ನಮ್ಮ ಸಂಸ್ಕೃತಿ, ಆಚಾರ-ವಿಚಾರಗಳ ಮೇಲೆ ಧಾರ್ಮಿಕತೆ, ಸಾಮಾಜಿಕತೆ, ಆರ್ಥಿಕತೆಯ ಮೇಲೆ ಅಮೋಘ ಪ್ರಭಾವ ಬೀರಿತು. ಇದರಿಂದ ಪ್ರಭಾವಿತರಾದ ನಮ್ಮ ಸಮಾಜ ಒಂದು ನೂತನ ಜೀವನ ಕ್ರಮವನ್ನು ಅಳವಡಿಸಿಕೊಳ್ಳಲು ತೊಡಗಿದರು. ಜೊತೆಗೆ ಜನರು ಆಧುನಿಕತೆಗೆ ಜಾರುತ್ತಿರುವವರನ್ನು ಕಾಣಬಹುದಾಗಿದೆ. ಈ ದಿಸೆಯಲ್ಲಿ ಹೊಸ ಸಮುದಾಯ ಸಮಾಜವನ್ನು ಬೆಳಸುವಂತಹ ವೈಸಿಷ್ಟ್ಯವಾದ ಪರಿಕಲ್ಪನೆಗಳು ಉದಯಿಸಿದವು. ಅವುಗಳಲ್ಲಿ ಸಾಹಿತ್ಯದ ಕೃಷಿಯ ಪರಿಕಲ್ಪನೆ ಮುಖ್ಯವಾದದ್ದು.

ಅನುವಾದ, ರೂಪಾಂತರ, ಸಾನೆಟ್, ಸುನೀತ, ಪ್ರಬಂಧ, ಭಾಷಾಂತರ, ರಚನೆ, ಆತ್ಮಕತೆಗಳು, ಶಿಶುಗೀತೆಗಳು, ಭಾವಗೀತೆ, ಪ್ರವಾಸ ಸಾಹಿತ್ಯ, ಕಥನಕಾವ್ಯ, ವೈಜ್ಞಾನಿಕ ಸಾಹಿತ್ಯ ರೂಪಗಳಲ್ಲಿ ಸಾಹಿತ್ಯ ಪ್ರಕಾರಗಳು ಸೃಷ್ಟಿಯಾದವು.

ಈ ಜಾಡಿನಲ್ಲಿ ಸಣ್ಣಕತೆಗಳು ಮುಖ್ಯವಾದ ಪಾತ್ರವನ್ನು ವಹಿಸಿತು. ಕನ್ನಡ ಸಾಹಿತ್ಯದ ಬೇರೆ ಪ್ರಕಾರಗಳಂತೆ ಸಣ್ಣಕತೆ ಬದುಕಿನ ಜ್ವಲಂತ ಸಮಸ್ಯೆಗಳ ಬಗೆಗೆ ಹಾಗೂ ಬದುಕಿನ ಜೀವನದ ಸವಾಲುಗಳನ್ನು ತನ್ನದೆಯಾದಂತಹ ವಿಶಿಷ್ಟ ಬಗೆಯಲ್ಲಿ ಬಿಡಿಯಾಗಿ ವಿವಿಧ ಬಗೆಯ ಘಟನೆ, ಸಂದರ್ಭ, ಪಾತ್ರಗಳ ಮುಖೇನ ಸೃಜನಾತ್ಮಕವಾಗಿ ಬಿಡಿಸುವ ಕಡೆಗೆ ಯಶಸ್ಸಿನ ಮೆಟ್ಟಿಲನ್ನು ಏರಿತು.

ಹೊಸಗನ್ನಡ ಸಾಹಿತ್ಯವನ್ನು ಗುರುತಿಸುವುದು ಭಾವಗೀತೆಯ ಮೂಲಕ. ಸಣ್ಣಕತೆಗಳಲ್ಲಿ ನೈಜ ವ್ಯಕ್ತಿಗಳ ಜೀವನದ ಚಿತ್ರಣ, ಹಾಗೂ ಸರಳ ಸುಂದರವಾದ ಗದ್ಯದ ನಿರೂಪಣೆ ಸಣ್ಣಕತೆಗಳಲ್ಲಿ ಕಾಣಬಹುದು. ಕಾವ್ಯ, ಕಾದಂಬರಿ, ನಾಟಕ ಮೊದಲಾದ ಸೃಜನಾತ್ಮಕ ಬರಹಗಳ ಜೊತೆಗೆ ಸಣ್ಣಕತೆ ತನ್ನದೇ ಆದಂತಹ ಮಹತ್ವವನ್ನು ಹೊಂದಿದೆ.

ನೆಪೋಲಿಯನ್ ಜೋನೋಪಾರ್ಟೆಯ ಮೂರ್ತಿ ಚಿಕ್ಕದಾದರೂ ಸಾಧನೆ ದೊಡ್ಡದು. ಈ ದಿಸೆಯಲ್ಲಿ ಸಣ್ಣಕತೆ ಚಿಕ್ಕದಾಗಿ ಕಂಡರೂ ಅದರಲ್ಲಿರುವ ವಾಸ್ತವಿಕ ಸತ್ಯ, ಬದುಕಿನ ಶೈಲಿ, ನಂಬಿಕೆ, ಮೂಢನಂಬಿಕೆ, ಧರ್ಮ, ಮನೋಧರ್ಮ, ಆಡಂಬರದ ಬದುಕು, ಏಕಾಂತತೆ, ತಂತ್ರಗಳು, ಜೀವನ ಶೈಲಿಯನ್ನು ಬದಲಾಯಿಸುವ ದಿಸೆಯಲ್ಲಿ ಸಣ್ಣಕತೆ ಅಮೂಲಾಗ್ರವಾಗಿ ನಿಲ್ಲುತ್ತದೆ.

ಸಣ್ಣಕತೆ ಕಾದಂಬರಿಯಂತೆ ವಸ್ತು, ಸನ್ನಿವೇಶ, ಸಂದರ್ಭ, ವಿಶಾಲವಾದ ವಾಸ್ತವ ಮತ್ತು ಹೊರಗಿನ ವಿಷಯವನ್ನು ತೆಗೆದುಕೊಳ್ಳುವ ಒಂದು ಪ್ರಮುಖ ಪ್ರಕಾರ. ಸಣ್ಣಕತೆ ಇಂಗ್ಲಿಷ್ ಸಾಹಿತ್ಯ ರೂಪದಿಂದ ಬಂದದ್ದು. ಕತೆಯ ಬಗ್ಗೆ ವ್ಯಕ್ತಿಗೆ ಕುತೂಹಲವನ್ನುಂಟುಮಾಡುವ ಪ್ರಕ್ರಿಯೆಯ ಜೊತೆಗೆ ಭಾವಗೀತದ ನಂತರ ಹೊಸದಾಗಿ ಸೇರ್ಪಡೆಯಾದ ಸಾಹಿತ್ಯ ಪ್ರಕಾರ ಸಣ್ಣಕತೆ. ಜನರ ಮನಸ್ಸಿನಲ್ಲಿ ಸಾಹಿತ್ಯದ ಬೇರೆ ಪ್ರಕಾರದ ರೂಪಗಳಿಗಿಂತಲೂ ಕನ್ನಡದಲ್ಲಿ ಸಣ್ಣಕತೆಯೇ ಅತ್ಯಂತ ಜನಪ್ರಿಯ ರೂಪವಾಗಿರುವುದು ಗಮನಾರ್ಹ.

ಕಾದಂಬರಿ ಮತ್ತು ಸಣ್ಣಕತೆಯನ್ನು ಹೋಲಿಸಿದರೆ ಕಾದಂಬರಿ ತುಂಬಾ ದೀರ್ಘ ಗದ್ಯರೂಪದ್ದು. ಸಣ್ಣಕತೆ ಗದ್ಯ ನಿರೂಪಣೆವುಳ್ಳದಾಗಿ ತುಂಬಾ ಸರಳವಾಗಿ ಚಿಕ್ಕದಾಗಿರುತ್ತದೆ. ಸಣ್ಣಕತೆಗೆ ಒಂದು ಉನ್ನತ ಸ್ಥಾನಮಾನ, ಜನಪ್ರಿಯತೆ ಕಲ್ಪಿಸುವುದರಲ್ಲಿ ಜ್ಞಾನಪೀಠ ವಿಜೇತರಾದ ಶ್ರೀ ಮಾಸ್ತಿವೆಂಕಟೇಶ ಅಯ್ಯಂಗಾರ್‌ರವರು ಪ್ರಮುಖರು. ಹೀಗಾಗಿ ಸಣ್ಣಕತೆಯ ವಿಷಯದಲ್ಲಿ ಮಾಸ್ತಿಯವರ ಹೆಸರು ಅಮರವಾಗಿ ಚಿರಸ್ಥಾಯಿಯಾಗಿ ನಿಂತಿದೆ.

ಸಣ್ಣಕತೆಗಾರರಲ್ಲಿ ಪ್ರಮುಖವಾಗಿ ಕೊಡಗಿನ ಗೌರಮ್ಮ, ಸಾವಿತ್ರಮ್ಮ, ವೀಣಾ ಶಾಂತೇಶ್ವರ, ವೈದೇಹಿ, ಅನುಪಮಾನಿರಂಜನ, ಆರ್ಯಾಂಬ ಪಟ್ಟಾಭಿ, ಸಾರಾಅಬೂಬಕ್ಕರ್, ಬೆಸಗರಹಳ್ಳಿ ರಾಮಣ್ಣ, ನಿರಂಜನ, ಬಾನುಮುಷ್ತಾಕ್, ಚದುರಂಗ, ಯಶವಂತ ಚಿತ್ತಾಲ, ಅಶ್ವತ್ಥ, ಫಕೀರ್ ಮಹಮ್ಮದ್ ಕಟ್ಪಾಡಿ, ಯು.ಆರ್.ಅನಂತಮೂರ್ತಿ, ದೇವನೂರು ಮಹದೇವ, ಕುಂ.ವೀರಭದ್ರಪ್ಪ – ಹೀಗೆ ಇನ್ನೂ ಮುಂತಾದ ಉನ್ನತ ಶ್ರೇಷ್ಠಮಟ್ಟದ ಕತೆಗಾರರನ್ನು ಕಾಣಬಹುದಾಗಿದೆ.

ಕನ್ನಡ ಸಣ್ಣಕತೆಯ ಇತಿಹಾಸದಲ್ಲಿ ಪಾಶ್ಚಾತ್ಯದ ಸಣ್ಣಕತೆಗಳಿಗೆ ಸಂವಾದಿಯಾಗಿ ಕನ್ನಡದ ಸಣ್ಣಕತೆ ಮೂಡಿಬಂದಿದೆ. ಸೂಕ್ಷ್ಮತೆ, ಕಲಾಗಾರಿಕೆ, ವಾಸ್ತವಿಕ ಅಂಶಗಳು, ತುಡಿತಭಾಷೆ, ಅನುಭವಸಾರ, ಸಂಕ್ಷಿಪ್ತ ವಿಷಯ, ಗುರಿಯ ಏಕತಾನತೆ, ಚಿಕ್ಕ ಚಿಕ್ಕ ಸಂಭಾಷಣೆ ಭಾವನೆ, ಒಂದೇ ಸಮನೆ ಓಸುಮುಗಿಸಬಹುದಾದ ವಿಭಿನ್ನ ಸಂಸ್ಕೃತಿಯ

ನೇರ ಸಂಘರ್ಷತೆ ಮತ್ತು ಸಂವೇದನೆಗಳೊಳಗೆ ಮೂಡಿದ ಸಾಹಿತ್ಯ ರೂಪವಾಗಿದೆ. ಹಾಗೆಯೇ ಪರಂಪರೆಯನ್ನು ಅರಗಿಸಿಕೊಂಡು ಭಾರತದಾದ್ಯಂತ ಇಂಗ್ಲಿಷ್ ವಿದ್ಯಾಭ್ಯಾಸದ ಪ್ರಭಾವದಿಂದ ಭಾರತೀಯ ಪರಂಪರಾಗತ ಕಥನಶೈಲಿಗಿಂತ ಭಿನ್ನವಾದ ಹೊಸ ಪ್ರಕಾರವಾಗಿ ಕಥಾಸಾಹಿತ್ಯ ಪ್ರಕಾರ ಭಾರತದಲ್ಲಿ ಬೆಳೆದು ನಿಂತಿದೆ.

ಸಣ್ಣಕತೆ ಭಾವಗೀತೆಯಂತೆ ಚಿಕ್ಕದಾದ ಭಾವನೆಗಳ ಅಭಿವ್ಯಕ್ತಿ. ಅಲ್ಲದೇ ಪರಿಣಾಮದಲ್ಲಿ ಏಕತಾನತೆ, ಗುರಿ, ಸಾಧನೆ, ಶ್ರಮ, ಪ್ರತಿಭೆ, ತೀಕ್ಷ್ಣತೆ, ವಾಸ್ತವಿಕ ನಿರೂಪಣೆ, ಸರಳವಾದ ಶೈಲಿಯ ಸಣ್ಣಕತೆಯನ್ನು ಜೀವಂತಿಕೆಯಲ್ಲಿ ಇಟ್ಟಿರುವುದಕ್ಕೆ ಕಾರಣವಾಗುತ್ತವೆ.

ಶಿವಕೋಟ್ಯಾಚಾರ್ಯರ 'ವಡ್ಡಾರಾಧನೆ' ಕನ್ನಡದ ಪ್ರಾಚೀನ ಗದ್ಯ ಕತೆಗಳನ್ನೊಳ-ಗೊಂಡಿದೆ. ನಯಸೇನನ 'ಧರ್ಮಾಮೃತ'ದ ವಸ್ತುವಿಷಯ, ತಂತ್ರಗಾರಿಕೆಗೂ ಹಾಗೂ ಈಗಿನ ಸಣ್ಣಕತೆಗಳ ವಸ್ತು, ಸನ್ನಿವೇಶ, ಸಂದರ್ಭಕ್ಕೂ ಅನೇಕ ಬಗೆಯ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಈಗಿನ ಸಣ್ಣಕತೆಗಳು ಜನರ ಹತ್ತಿರ ಹೋಗುವಲ್ಲಿ ಯಶಸ್ವಿಯಾಗಿವೆ. ಕಾರಣ ಸರಳ ಸುಂದರವಾದ ಭಾಷೆಯ ಅಭಿವ್ಯಕ್ತಿ, ಸಣ್ಣಕತೆಯು ವಸ್ತು ಪರಿಮಿತಿಯೊಳಗೆ ಸಮರ್ಪಕವಾಗಿ ಮತ್ತು ಪರಿಣಾಮಕಾರಿಯಾಗಿ ನಿರೂಪಿಸಬಲ್ಲದು.

**ಸಣ್ಣಕತೆಗಳ ಪ್ರಮುಖ ಉದ್ದೇಶಗಳು:**

- ವಸ್ತುವಿನ ಆಯ್ಕೆಯಲ್ಲಿ ತೀವ್ರವಾದ ಜಾಣತನ ಮತ್ತು ಪ್ರತಿಭೆಯು ಜೀವನ ಸಾರವನ್ನು ತಿಳಿಸುವಂತಿರಬೇಕು.
- ವ್ಯಕ್ತಿಯ ವ್ಯಕ್ತಿತ್ವದ ಭಾವನೆಗಳನ್ನು ನಿಖರವಾಗಿ ಗುರುತಿಸಬೇಕು.
- ಸಣ್ಣಕತೆ ಗುರಿಯ ದೃಷ್ಟಿಯಿಂದ ಮೌಲ್ಯಯುತವಾದ ಅಂಶಗಳನ್ನು ಸೇರಿಸಬೇಕು.
- ಸಣ್ಣಕತೆಯಲ್ಲಿ ಏಕಾತಾನತೆಯ, ಕಲ್ಯಾಣತೆಯ ಗುಣ ಪ್ರಧಾನವಾಗಿರಬೇಕು.
- ಸಣ್ಣಕತೆಗಳು ಸೂಕ್ಷ್ಮವಾಗಿ ವಸ್ತು ವಿಷಯಗಳನ್ನು ಅಭಿವ್ಯಕ್ತಿಸುತ್ತದೆ.
- ಸಣ್ಣಕತೆಗಳಲ್ಲಿನ ಸಂಭಾಷಣೆಗಳು ವರ್ಣನೆಗಳಿಂದ ಕೂಡಿದ್ದರೆ ಮನೋಜ್ಞವಾಗಿರುತ್ತವೆ.
- 'ಸಂಕ್ಷಿಪ್ತತೆ' ಪ್ರಸ್ತುತ ಸಣ್ಣಕತೆಗಳ ಅತ್ಯಂತ ಉನ್ನತ ಗುಣವಾಗಿದೆ.

- ಸಣ್ಣಕತೆಯಲ್ಲಿ ಮಾತು ಆಡಿದರೆ ಹೋಯಿತು ಮುತ್ತು ಹೊಡೆದರೆ ಹೋಯಿತು ಎಂಬಂತೆ ಮಾತು ಸರಳ ಮಿತವಾಗಿರಬೇಕು.
- ಸಣ್ಣಕತೆ ತನ್ನ ಸುತ್ತಮುತ್ತಲಿನ ಅನುಭವಗಳನ್ನು, ನೆನಪುಗಳನ್ನು ವಿಚಾರಗಳನ್ನು, ಆಚಾರಗಳನ್ನು ಪ್ರತಿಬಿಂಬಿಸುತ್ತದೆ.
- ದೊಡ್ಡದಾದ ಕಾದಂಬರಿಯಲ್ಲಿ ಹೇಳಲಾಗದಿದ್ದನ್ನು ಒಂದು ಸಣ್ಣಕತೆಯಲ್ಲಿ ಹೇಳುವ ಯತ್ನ ಈ ಸಣ್ಣಕತೆಯ ಲಕ್ಷಣ.
- ಧ್ವನಿ, ಪ್ರತಿಮೆ ಮತ್ತು ಸಂಕೇತಗಳ ಮೂಲಕ ಮಾತಿನ ಚಮತ್ಕಾರದ ಭಾಷೆಯನ್ನು ತೊಡಿಸಿ ಬರವಣಿಗೆ ಚೌಕಟ್ಟಿನಲ್ಲಿ ಪರಿಣಾಮಕಾರಿಯಾಗಿ ಹಿಡಿದಿಡುವುದು.
- ಸಣ್ಣಕತೆಗಳ ಪಾತ್ರಗಳು ಸಾಮಾನ್ಯವಾಗಿ ಶೋಷಿತ ವರ್ಗದವರು, ಮಹಿಳೆಯರು, ಅನಾಥರು, ಅನಾರೋಗ್ಯದವರು, ಜೀವನದಲ್ಲಿ ಉತ್ಸುಕತೆಯನ್ನು ಕಳೆದುಕೊಂಡಿರುವವರು ಬದುಕಿನಲ್ಲಿ ಗುರಿಯೆಡೆಗೆ ನಡೆದು ವಿಜಯಶಾಲಿಗಳಾಗುವ ಪಾತ್ರಗಳಾಗಿರುತ್ತವೆ.
- ಕತೆಯ ಸಂವಿಧಾನವು ಮತ್ತು ತಂತ್ರವು ಪ್ರಮುಖ ಲಕ್ಷಣವಾಗಿದ್ದು, ಇವು ಕತೆಯ ಓದಿಸುವಿಕೆಗೆ ಗುರಿಯೆಡೆಗೆ ತಲುಪಲು ಪ್ರಮುಖ ಪಾತ್ರ ನಿರ್ವಹಿಸುತ್ತವೆ.
- ಒಂದು ಕಹಿ ಘಟನೆ ಮತ್ತು ಸಣ್ಣ ಸಣ್ಣ ವಿಷಯಗಳನ್ನು ಅಭಿವ್ಯಕ್ತಿಸಲು ಸಣ್ಣಕತೆ ಒಂದು ವೇದಿಕೆ.
- ಸಣ್ಣಕತೆ ಎಂಬುದನ್ನು ಎಲ್ಲರೂ ಓದಿ ಅರ್ಥೈಸಿಕೊಳ್ಳಬಹುದಾದ ಸುಲಭವಾದ ಗದ್ಯರೂಪ.
- ಸಣ್ಣಕತೆಯ ಉದ್ದೇಶ ಮೌಲ್ಯಗಳ ಅಭಿವ್ಯಕ್ತಿ.
- ಸಣ್ಣಕತೆಯಲ್ಲಿ, ನೀತಿನಿಯಮಗಳು, ಹಿಂಸೆ–ಅಹಿಂಸೆ, ಸಮಸ್ಯೆ, ಜೀವನದ, ಘಟನೆಗಳು, ಸನ್ನಿವೇಶಗಳು, ಸಂದರ್ಭಗಳು ಕತೆಯ ವಸ್ತುಗಳಾಗಿರುತ್ತವೆ.
- ಸಣ್ಣಕತೆಯು ಗದ್ಯ, ಕಾವ್ಯ, ಭಾವಗೀತೆ, ಕಾದಂಬರಿ, ಪ್ರಬಂಧ ಮುಂತಾದ ರೂಪಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಜನಪ್ರಿಯದತ್ತ ಸಾಗಿದೆ ಎಂದು ಹೇಳಬಹುದು.

- ಕತೆಯಲ್ಲಿ ಪಾತ್ರ ಪ್ರಧಾನವಾದಂತಹವು ಓದುಗರನ್ನು ಓದಿಸುವಿಕೆಯ ಕ್ರಿಯೆಯಲ್ಲಿ ಏಕಾಗ್ರತೆಯನ್ನುಂಟುಮಾಡುವ ಶಕ್ತಿ ಈ ಸಣ್ಣಕತೆಗಳಿಗೆ ಇದೆ.
- ಅರ್ಧತಾಸು ಅಥವಾ ಒಂದು ತಾಸಿನಲ್ಲಿ ಓದುಮುಗಿಸಬಹುದಾದ ಕತೆಗಳು
- ವಾಸ್ತವಿಕತೆಯನ್ನು ಎತ್ತಿತೋರಿಸುತ್ತದೆ.
- ಸಣ್ಣಕತೆಯು ಒಂದು ವಿಶ್ವದ ಘಟನೆ, ಸನ್ನಿವೇಶಗಳನ್ನು ತೋರಿಸುತ್ತದೆ.
- ಭಾಷೆ ಅತಿಸೂಕ್ಷ್ಮತೆ ಮತ್ತು ವಿಶ್ವಾಸವನ್ನುಂಟು ಮಾಡುವಂತಹ ಬರವಣಿಗೆ ಶೈಲಿಗಳು.
- ವಸ್ತು, ಸನ್ನಿವೇಶ, ಪಾತ್ರ, ಸಂಭಾಷಣೆ ನಿರೂಪಣೆ ಶೈಲಿಗಳೂ ಓದುಗರ ಸಹೃದಯದ ಮನಗೆಲ್ಲುವಲ್ಲಿ ಇವೆಲ್ಲವುಗಳ ಪಾತ್ರ ಅಮೋಘ ಅನಂತ.

ಸಣ್ಣಕತೆಗಳು ಪ್ರಾರಂಭದಲ್ಲಿ ಪತ್ರಿಕೆಗಳ ಮೂಲಕವೇ ಆರಂಭವಾದದ್ದು, ಈ ಕಥಾಪರಂಪರೆಯ ಕನ್ನಡ ಸಾಹಿತ್ಯ ರೂಪಗಳಾದಂತಹ ನವೋದಯ, ನವ್ಯ, ದಲಿತಬಂಡಾಯ, ಪ್ರಗತಿಶೀಲಗಳಲ್ಲಿಯೂ ಅನೇಕ ಕತೆಗಳು ರಚನೆಗೊಂಡಿವೆ.

ನವೋದಯ ಕವಿಗಳು ಪ್ರಕೃತಿ ಮತ್ತು ರಮಣೀಯತೆಗೆ ಮನಸೋತವರು. ರಾಷ್ಟ್ರದ, ವ್ಯಕ್ತಿಯ ಆಸಕ್ತಿಗೆ ಅನುಗುಣವಾಗಿ ಸಾಂಸ್ಕೃತಿಕವಾಗಿ ಸಣ್ಣಕತೆಗಳನ್ನು ರಚಿಸಿದರು. ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಅನುಮಾನದಿಂದ ನೋಡುತ್ತಿದ್ದ ಸನ್ನಿವೇಶದಲ್ಲಿ ಸಣ್ಣಕತೆಗಳ ಜಾಗೃತಿಗೆ ವೇದಿಕೆಯಾಯಿತು.

ಮತಭೇದಗಳ ಅಂತರವಿಲ್ಲದೆ ವಿರಾಮದ ಸಮಯವನ್ನು ಸದುಪಯೋಗ-ಪಡಿಸಿಕೊಳ್ಳಲು, ಸೋಮಾರಿತನವನ್ನು, ಆಯಾಸವನ್ನು ನಿವಾರಿಸಿಕೊಳ್ಳಲು ಎಲ್ಲರಿಗೂ ಕತೆಗಳು ಅವಶ್ಯಕ. ಹಿಂದಿನ ಕಾಲದ ಜನರಿಗೆ ಮನರಂಜನಾ ಕಾರ್ಯಕ್ರಮವಾಗಿ ಸಣ್ಣಕತೆಗಳು ಮುಡಿಬಂದವು.

ಸಾಹಿತ್ಯ ಕೃಷಿಯಲ್ಲಿ ಮಾತ್ರವಲ್ಲದೆ ತತ್ವಜ್ಞಾನ, ವಿಜ್ಞಾನ ಪ್ರಪಂಚಗಳಲ್ಲಿಯೂ ಕಥನಕಾವ್ಯ ಬಹಳ ಪ್ರಸಿದ್ಧವಾಗಿದೆ.

"ಬೈಬಲ್, ಕುರಾನ್, ಉಪನಿಷತ್ತುಗಳಲ್ಲಿ ಕತೆಯ ಉಪಯೋಗ ಕಂಡುಬಂದಿರುವುದಲ್ಲದೆ, ಪರ್ಷಿಯಾ, ಅರೇಬಿಯಾ ದೇಶಗಳ ಸೂಫಿ ತತ್ವಜ್ಞರು ಕತೆಯ ಮೂಲಕವೇ ತಮ್ಮ ವಿಚಾರಗಳನ್ನು ಪ್ರತಿಪಾದಿಸುವ ಪರಿಪಾಠ-ವನ್ನಿಟ್ಟುಕೊಂಡಿದ್ದರು"[೧]

---

೧. ಅನಕೃ ಸಾಹಿತ್ಯ ಮತ್ತು ಜೀವನ: ಶಾರದಾ ಪ್ರಕಟನಾಲಯ, ೧೯೬೧, ಪು. ೮೮.

ಹೊಸಗನ್ನಡ ಸಾಹಿತ್ಯದ ಕೃಷಿಯಲ್ಲಿ ಸಣ್ಣಕತೆಗಳ ಬೆಳವಣಿಗೆಗೆ ಪೂರಕವಾದ ಪರಿಸರ ನಿರ್ಮಾಣವಾಗುತ್ತಿರುವುದು ಹೆಮ್ಮೆಯ ವಿಷಯ. ಇದರಿಂದ ಆಧುನಿಕ ಸಣ್ಣಕತೆಗಳು ಕನ್ನಡದ ಸಾಹಿತ್ಯದ ಕೃಷಿಯಲ್ಲಿ ವಿಸ್ತಾರವಾಗುತ್ತಾ ಹೋಗುತ್ತದೆ. ಈ ದಿಸೆಯಲ್ಲಿ ಲೇಖಕರ, ಓದುಗರ ಪತ್ರಿಕೆಗಳ ಕೊಡುಗೆ ಅಮೋಘವಾದದ್ದು. ಜಯಕರ್ನಾಟಕ, ಪ್ರಬುದ್ಧ ಕರ್ನಾಟಕ, ಲಂಕೇಶ್ ಪತ್ರಿಕೆ, ಜೀವನ ಜಯಂತಿ, ಪ್ರಜಾವಾಣಿ ಇನ್ನೂ ಮುಂತಾದ ಪತ್ರಿಕೆಗಳು ಕಥಾ ಅಭಿವೃದ್ಧಿಗೆ ಪ್ರೋತ್ಸಾಹದಾಯಕ-ವಾಗಿ ನಿಂತಿವೆ. ಕಥಾಂಜಲಿ, ಕಥಾಕುಂಜ, ಕತೆಗಾರ ಮೊದಲಾದ ಪತ್ರಿಕೆಗಳು ಕತೆಗಳ ಪ್ರಕಟಣೆಗೆ ಮೀಸಲಾತಿ ನವ ಕತೆಗಾರರನ್ನು ಆಕರ್ಷಿಸಿ ವೇತನವನ್ನು ತಂದುಕೊಡುತ್ತಿವೆ.

೧೯೨೦ರಲ್ಲಿ ಪ್ರೇರಕವಾದ ಶ್ರೀ ಮಾಸ್ತಿಯವರ ಕೆಲವು ಸಣ್ಣಕತೆಗಳು ಕೃತಿಗೆ ಅಪಾರವಾದ ಬೆಲೆ, ಮೌಲ್ಯ, ಸ್ಥಾನವಿರುವುದನ್ನು ಕಾಣಬಹುದು.

೧೯೩೫ರ ಸುಮಾರಿನಲ್ಲಿ ಕತೆಗಾರ ಇ.ಎ.ಭಾಸ್ಕರರಾಯರ ಹೆಸರಿನಲ್ಲಿ. ಸಾಹಿತ್ಯ ಪರಿಷತ್ತು ಪ್ರಾರಂಭಿಸಿದ ಸಣ್ಣಕತೆಗಳ ಸ್ಪರ್ಧೆ – ಹೀಗೆ ಹಲವಾರು ಸಣ್ಣಕತೆಗಳ ಬೆಳವಣಿಗೆಗೆ ಪೂರಕವಾಗಿ ನಿಂತಿವೆ.

ಈ ನಿಟ್ಟಿನಲ್ಲಿ ನೇಮಿಚಂದ್ರರವರ ಸಣ್ಣಕತೆಗಳು ಅಮೂಲಾಗ್ರವಾಗಿ ನಿಲ್ಲುತ್ತವೆ. ನೇಮಿಚಂದ್ರರವರ ಕತೆಗಳ ಹಿಂದೆ ಅವರ ಪರಿಶ್ರಮ, ಚಿಂತನೆ ಮತ್ತು ಯೋಚನೆಯ ಪ್ರತಿಫಲವನ್ನು ಕಾಣಬಹುದು. ವಿಷಯದ ಆಯ್ಕೆಯಿಂದ ಮೊದಲುಗೊಂಡು ಸಂಭಾಷಣೆಯ ರಚನೆಯವರೆಗೆ ಅವರು ಸತತವಾಗಿ ಚಿಂತಿಸುವುದರ ಜೊತೆಗೆ ಸಣ್ಣಕತೆಯಲ್ಲಿ ವಿನೂತನ ಬಗೆಯ ಚಿಂತನೆ ಮೂಲಕ ಸಣ್ಣಕಥಾ ಪ್ರಪಂಚದಲ್ಲಿ ವಿಶಿಷ್ಟ ಛಾಪುಮೂಡಿಸಿದ್ದಾರೆ.

ಸಣ್ಣಕಥಾ ಲೇಖಕರ ಕತೆಗಳನ್ನು ಅಧ್ಯಯನ ಮಾಡಿದಾಗ ಪ್ರತಿಯೊಬ್ಬ ಬರಹಗಾರನ ಭಾಷಾಶೈಲಿ ಯೋಚನಾ ಲಹರಿ ಅನನ್ಯ. ನೇಮಿಚಂದ್ರರವರ ಕತೆಗಳು ಆಧುನಿಕ ಚಿಂತನೆ, ರೂಢಿಗತ ಸಂಪ್ರದಾಯಗಳ ಕುರಿತಾದ ಅವರ ತಾತ್ವಿಕತೆಯಲ್ಲಿನ ಹೊಸ ನಿಲುವು ಉಳ್ಳಂಥವು ಎಂಬುದನ್ನು ಅಧ್ಯಯನದ ಸಂದರ್ಭದಲ್ಲಿ ಕಂಡುಕೊಂಡು ಆ ಕಾರಣಕ್ಕಾಗಿ ನೇಮಿಚಂದ್ರರವರ ಕತೆಗಳನ್ನು ನಾನು ಈ ನಿಬಂಧ ರಚನೆಗೆ ಆರಿಸಿಕೊಂಡಿದ್ದೇನೆ.

*****

# ಅಧ್ಯಾಯ – ೨
# ಸಣ್ಣಕತೆಗಳ ಉಗಮ ಮತ್ತು ಬೆಳವಣಿಗೆ

**ಹೊಸಗನ್ನಡದಲ್ಲಿ** ಸಮೃದ್ಧವಾದ ಪ್ರಕಾರದಲ್ಲಿ ಒಂದು ಸಣ್ಣಕತೆ. ಪಾಶ್ಚಾತ್ಯ ಸಾಹಿತ್ಯ ಸಂಪರ್ಕದಿಂದ ಈ ಪರಿಭಾಷೆ ಹುಟ್ಟಿಬಂದಿದೆ. ಕನ್ನಡ ಸಾಹಿತ್ಯದಲ್ಲಿ ಪೂರ್ವದಿಂದಲೇ ಸಣ್ಣಕತೆಗಳು ಇರುವುದು ಗಮನಕ್ಕೆ ಬರುವುದಾದರೂ ಸಾಹಿತ್ಯದಲ್ಲಿ ಒಂದು ಪ್ರಕಾರವಾಗಿ ವಿಸ್ತಾರವಾಗಿ ವೈವಿಧ್ಯಪೂರ್ಣವಾಗಿ ಬೆಳೆದುಬಂದಿರುವುದು. ೧೯ನೇ ಶತಮಾನದಲ್ಲಿ ಎಂಬುದು ನಿರ್ವಿವಾದ. ಗದ್ಯ ಪ್ರಕಾರದಲ್ಲಿ ಗಮನಸೆಳೆಯುವ ಸಣ್ಣಕತೆ ರೂಪದಲ್ಲಿ ಚಿಕ್ಕದು. "ಪರಿಮಿತಿ ದೀರ್ಘತೆಯ ಗದ್ಯ ನಿರೂಪಣೆ" ಎಂಬ ಲಕ್ಷಣವನ್ನು ಹೇಳುವುದಾದರೆ ಬಹಳ ಹಿಂದಿನಿಂದಲೇ ಇತ್ತೆಂದು ಹೇಳಬಹುದು.

ಈಜಿಪ್ಟ್ ಭಾಷೆಯ 'The Two Brothers' ಎಂಬುದೇ ಪ್ರಾಚೀನ ಕತೆ, ಜಾತಕ ಕತೆಗಳು, ಪಂಚತಂತ್ರ, ಈಸೋಪನ ನೀತಿಕತೆಗಳು, ಅರೇಬಿಯನ್ ನೈಟ್ಸ್ ಕತೆಗಳು. ಹೀಗೆ ಪ್ರಾಚೀನ ಕತೆಗಳ ಪಟ್ಟಿ ಕೊಡಬಹುದಾದರೂ ಆಧುನಿಕ ಸಾಹಿತ್ಯದಲ್ಲಿ ಸಿಕ್ಕ ಸ್ಥಾನಮಾನಗಳೆ ಬೇರೆ. ಹಿಂದೆ ಬಂದ ಕತೆಗಳು ಯಾವುದಾದರೂ ಪ್ರಸಿದ್ಧ ಮೂಲ-ದಿಂದ ಬಂದವುಗಳಾಗಿದ್ದವು. ೧೯ನೇ ಶತಮಾನದಲ್ಲಿ ವೃತ್ತಪತ್ರಿಕೆಗಳ ಮಾಧ್ಯಮದಿಂದ ಸಣ್ಣಕತೆಗಳ ಪ್ರಚಾರಕ್ಕೆ ಹೆಚ್ಚು ಒತ್ತು ದೊರೆತು ಹೊಸ ಸ್ವತಂತ್ರ ಕತೆಗಳ ರಚನೆಗೆ ಪ್ರೇರಣೆ ದೊರೆಯಿತು.

ನವೋದಯ ಸಾಹಿತ್ಯದಲ್ಲಿ ಒಂದು ಪ್ರಕಾರವಾಗಿ ತಲೆಯೆತ್ತಿದ ಕತೆ ಮಾಸ್ತಿಯವರ ಮೂಲಕ ಕನ್ನಡದಲ್ಲಿ ಪ್ರಸಿದ್ಧಿಯನ್ನು ಪಡೆಯಿತು. ಕನ್ನಡದ ಆಸ್ತಿ ಎನಿಸಿಕೊಂಡ ಮಾಸ್ತಿಯವರು ಸುಮಾರು ೮೮ ಕತೆಗಳನ್ನು ಬರೆದವರು. ಭಾರತೀಯ ಸಾಂಸ್ಕೃತಿಕ ಆಚಾರವಿಚಾರಗಳೇ ಅವರ ಕತೆಗೆ ಮೂಲವಾಗಿದೆ. ಇದರೊಟ್ಟಿಗೆ ಅನೇಕ ಸಂಸ್ಕೃತಿಯೊಂದಿಗೆ ಹೊಂದಿಕೊಳ್ಳಬೇಕಾದ ಅನಿವಾರ್ಯ ತಾಕಲಾಟಗಳ, ಸ್ಥಿತ್ಯಂತರ-ಗೊಳ್ಳುತ್ತಿದ್ದ ಬದುಕಿನ ಅನಿವಾರ್ಯ ಮಾನವೀಯ ಸಂಬಂಧಗಳು ಇಲ್ಲಿ ಕಾಣುವ ಮುಖ್ಯ ಅಂಶಗಳು. 'ರಂಗನ ಮದುವೆ', 'ಮೊಸರಿನ ಮಂಗಮ್ಮ', 'ಗೌತಮಿ ಹೇಳಿದ ಕತೆ', 'ಹೇಮಕೂಪದಿಂದ ಬಂದ ಮೇಲೆ', 'ಕಲ್ಮಾಡಿಯ ಕೋಣ' ಮುಂತಾದ ಪ್ರಸಿದ್ಧ ಕತೆಗಳನ್ನು ಹೆಸರಿಸಬಹುದು. ಪಂಜೆಯವರ ಕತೆಗಳಿಗೆ ಸಾಹಿತ್ಯ ರೂಪ ಒದಗಿಸಿದವರು. ಆನಂದ, ಅಶ್ವತ್ಥ ಮುಂತಾದವರು ನವೋದಯ ಕತೆಗಾರರು.

ಕೋಡೆಕ್ಕಲ್ ಶ್ರೀನಿವಾಸರ 'ಧನಿಯರ ಸತ್ಯನಾರಾಯಣ' ಪ್ರಗತಿಶೀಲ ಧೋರಣೆಯನ್ನು ವ್ಯಕ್ತಪಡಿಸುವಂಥದ್ದು, ಪ್ರಗತಿಶೀಲ ಕತೆಗಾರರಲ್ಲಿ ನಿರಂಜನ, ಬಸವರಾಜ ಕಟ್ಟೀಮನಿ, ಚದುರಂಗ ಮುಂತಾದವರು ಸ್ವಾತಂತ್ರ್ಯಾನಂತರದ ಜೀವನ ಶೈಲಿಯನ್ನು ಬಿಂಬಿಸುವ ಕತೆಗಳನ್ನು ರಚಿಸಿದ್ದಾರೆ. 'ಶವದ ಮನೆ' ಚದುರಂಗರ ಪ್ರಸಿದ್ಧ ಕತೆಯಾಗಿದೆ. ಅಂದಿನ ರಾಜಕೀಯ ಬೆಳವಣಿಗೆಯ ಪರಿಣಾಮವನ್ನು ತೋರುವಂಥದ್ದು.

ಬೆಂಗಳೂರು ಮಹಾನಗರದಲ್ಲಿ ಅಮಾಯಕರು ಒಳಗಾಗುವ ಶೋಷಣೆಯ ಚಿತ್ರಣ ಕೊಡುವ 'ಕೊನೆಯ ಗಿರಾಕಿ' ನಿರಂಜನರ ಯಶಸ್ವಿ ಕತೆಗಳಲ್ಲಿ ಒಂದು. ಅ.ನ.ಕೃರವರು ಸಂಪಾದಿಸಿದ ಕಾಮನಬಿಲ್ಲು ಪ್ರಗತಿಶೀಲ ಮನೋಧರ್ಮದ ಕತೆಗಳನ್ನು ಒಳಗೊಂಡಿದೆ.

ಕಾವ್ಯದಂತೆ ಸಣ್ಣಕತೆಗಳಲ್ಲಿ 'ನವ್ಯ' ತಂತ್ರ ಮತ್ತು ಮನೋಧರ್ಮದಲ್ಲಿ ವ್ಯಕ್ತವಾಗುವ ಅಂಶ ಹೊಸ ದನಿ, ಹೊಸ ತುಡಿತ ಕೇಳಿ ಬಂದುದು ನವ್ಯತೆಯಲ್ಲಿ ಅಡಿಗರ ಕಾವ್ಯದಲ್ಲಿ ಕಂಡುಬಂದ ಈ ಅಂಶ ನವ್ಯ ಕತೆಗಳಲ್ಲಿ ಇನ್ನೂ ಕಲಾತ್ಮಕವಾಗಿ ಕಂಡುಬಂದವು.

ವ್ಯಕ್ತಿಕೇಂದ್ರವಾದ ನವ್ಯದಲ್ಲಿ ಅಂತರಂಗದ ತುಡಿತ, ದ್ವಂದ್ವಗಳು ವ್ಯಕ್ತಿ ಮತ್ತು ಪರಿಸರದ ನಡುವಿನ ಬಿರುಕು, ವ್ಯಕ್ತಿಯ ಏಕಾಂಗಿ ಭಾವ "ಭಾವಗೀತೆಯಂತೆ, ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದೆಂಬ ಈ ಸೂಕ್ಷ್ಮ ಸಾಹಿತ್ಯರೂಪದಲ್ಲಿ ಪ್ರಯೋಗ ನಾವಿನ್ಯತೆ ಹೆಚ್ಚಿನ ಆಸ್ಪದ, ಅನುಕೂಲ, ಕಾಲಕಾಲಕ್ಕೆ ಜೀವನವೂ ಜ್ಞಾನವೂ, ಮನೋಧರ್ಮವೂ ಧರ್ಮವೂ ಬದಲಾಯಿಸುವಂತೆ ಕಥನಕಲೆಯೂ ಶೈಲಿಯೂ ಬದಲಾಯಿಸುತ್ತವೆ.[೧]

ಮಾಸ್ತಿಯವರ ಕತೆಗಳಲ್ಲಿ ನೇರವಾದ ಕಥನಮಾರ್ಗ, ಸರಳವಾದ ಭಾಷೆ, ಶೈಲಿ ಮತ್ತು ಮಾನವೀಯ ಮೌಲ್ಯಗಳ ಅಂಶಗಳನ್ನು ಕಾಣಬಹುದು.

ಅನುಪಮಾರ 'ದೇವರೆ ಬರಲಿಲ್ಲ' ಎಂಬ ಕತೆ ಸಮಾಜದ ಪುನರ್ರಚನೆ ಮನುಷ್ಯನ ಜವಾಬ್ದಾರಿಯೆಂದೂ, ಇಲ್ಲದ ದೇವರಲ್ಲಿ ಪ್ರಾರ್ಥನೆ ಮಾಡುತ್ತಾ ಸೋಮಾರಿಗಳಾಗಿ ಸರ್ವಕಾಲಕ್ಕೂ ದುರ್ವಿತರಾಗಿಯೇ ಉಳಿಯುವುದು ತರವಲ್ಲ–

---

೧. ನರಸಿಂಹಮೂರ್ತಿಯವರ ಅತ್ಯುತ್ತಮ ಸಣ್ಣಕತೆಗಳು, ಪು. ೫.

ವೆಂದೂ ಸೂಚಿಸುತ್ತದೆ. ಆದರೆ ಮಾನವ ಪ್ರೇಮ ೦.೦.೦ ಎಂಬ ಕತೆಗಳಲ್ಲಿ ಈ ದೃಷ್ಟಿ ಜೀವನ ರಹಸ್ಯವನ್ನು ಸಾಕಷ್ಟು ಪರಿಶೀಲಿಸಿಲ್ಲವೆಂದು ಧ್ವನಿತವಾಗುತ್ತದೆ.[೧]

೦.೦.೦ ಕನ್ನಡದಲ್ಲಿ ಮೊದಮೊದಲು ಬಂದ ನವ್ಯಕತೆಗಳಲ್ಲಿ ಒಂದಾಗಿದೆ. ಶ್ರೀನಿವಾಸರ ಸಂಪ್ರದಾಯದ ಕತೆಗಳು, ಹಾಥಾರ್ನ್, ಬೆಟ್‌ಹಾರ್ಟ್ ಓ ಹೆನ್ರಿ, ಸ್ಟೀವನ್‌ಸನ್, ಕಿಪ್ಲಿಂಗ್, ಗ್ಯಾಲ್ಸ್‌ವರ್ದಿ, ವೆಲ್ಸ್, ಡಾಪೆಟ್, ಮೋಪಾಸಂಟ್, ಮೋಂ, ಟ್ಯಾಗೋರ್ ಇವರ ಪ್ರಭಾವದಿಂದ ರೂಪಿತವಾಗಿದ್ದರೆ, ಚೆಕಾಫ್‌ಗಾರ್ಕಿ, ಲಾರೆನ್ಸ್ ಇವರ ಪ್ರಭಾವದಿಂದ ಪ್ರಗತಿಶೀಲ ಕತೆಗಳೂ, ಪೋ, ಜೇಮ್ಸ್, ಕಾನ್ಯಾಡ್, ಲಾರೆನ್ಸ್‌ಜಾಯ್ಸ್, ಚೆಕಾಫ್, ಕ್ಯಾಥರೀನ್, ಮ್ಯಾನ್ಸ್‌ಫೀಲ್ಡ್, ಹೆಮಿಂಗ್ವೆ, ಫಾಕ್ಕರ್ ಮುಂತಾದವರ ಪ್ರಭಾವದಿಂದ ನವ್ಯಕತೆಗಳೂ ರೂಪಿತವಾಗಿವೆ. ನವ್ಯಕಥನಮಾರ್ಗದ ಉತ್ತಮ ಪಾಶ್ಚಾತ್ಯ ಕತೆಗಳಿಗೆ ಚೆಕಾಫ್‌ನ 'ದಿ. ಬ್ರಿಡ್ಜ್', 'ಗೂಸ್ಟ್‌ಬೆರ್ರೀಸ್, ದಿ ಡಾರ್ಲಿಂಗ್, ಎಂಬ ಕತೆಗಳನ್ನಾಗಲೀ, ಜೇಮ್ಸ್‌ಜಾಯ್ಸನ ದಿ ಡೆಡ್ ಎಂಬ ಕತೆಯನ್ನಾಗಲೀ ಹೆಮಿಂಗ್ವೆ ಬರೆದಿರುವ ದಿ ಕಿಲ್ಲರ್ಸ್ ಅಥವಾ ಸ್ನೋಸ್ ಆಫ್ ಕಿಲಿಮಂಜೀರೋವನ್ನಾಗಲಿ ಉದಾಹರಣೆಯಾಗಿ ಕೊಡಬಹುದು.[೨] ಪರಕೀಯತೆ, ಅನಾಥಪ್ರಜ್ಞೆ, ಕಾಮದ ಒಳತೋಟಿಗಳು, ಅತೃಪ್ತ ಭಾವ ವಿಷಾದ ಭಾವಗಳು, ನವ್ಯ ಕತೆಗಳಿಗೆ ಚೌಕಟ್ಟು ಒದಗಿಸಿದ ಅಂಶಗಳು. ಫ್ರಾಯ್ಡ್‌ನ ಮನೋವೈಜ್ಞಾನಿಕ ವಿಚಾರ ಮಾನವನ ಮನೋಜಗತ್ತಿನ ದರ್ಶನ ಒದಗಿಸಿತು. ಸಂಕೀರ್ಣವೂ, ವರ್ಣಮಯವೂ, ರಹಸ್ಯಮಯವೂ ಆದ ಮನೋಜಗತ್ತನ್ನು ಕುರಿತು ಬರೆಯುವಾಗ ಭಾಷೆ, ವಸ್ತು, ತಂತ್ರಗಳು ಸಂಕೀರ್ಣವಾಗುವುದು ಅನಿವಾರ್ಯ-ವಾಯಿತು. ಸಂಕೇತ, ಪ್ರತಿಮಾ ರೂಪಗಳು ರೂಪತಾಳಿದವು.

ಸುಮಾರು ೧೯೫೦ರಿಂದ ಎರಡು ದಶಕಗಳಲ್ಲಿ ನವ್ಯ ಕತೆ, ನವ್ಯಕಾವ್ಯ, ನವ್ಯಕಾದಂಬರಿಗಳು ರಚಿತವಾದವು. ಬಿ.ಸಿ.ರಾಮಚಂದ್ರರವರ 'ಏಳನೆಯ ಜೀವ' ಅನಂತಮೂರ್ತಿಯವರ 'ಎಂದೆಂದೂ ಮುಗಿಯದ ಕತೆ', ಯಶವಂತ ಚಿತ್ತಾಲರ ಚೀನ್ಯಾ, ಕತೆಯಾದಳು ಹುಡುಗಿ, ಶಾಂತಿನಾಥ ದೇಸಾಯಿಯವರ ಕ್ಷಿತಿಜ, ಕೂರ್ಮಾವತಾರ, ಪಿ.ಲಂಕೇಶ್‌ರವರ ನಾನಲ್ಲಿ, ಉಮಪತಿಯ ಸ್ಕಾಲರ್‌ಷಿಪ್, ಕೆರೆಯ ನೀರನ್ನು ಕೆರೆಗೆ ಚೆಲ್ಲಿ, ತೇಜಸ್ವಿಯವರ 'ಸ್ವರೂಪ' ಇವು ಪ್ರಮುಖ ಕೃತಿಗಳು, ರಾಜಲಕ್ಷ್ಮಿ (ಸಂಗಮ) ವೀಣಾಶಾಂತೇಶ್ವರ(ಮುಳ್ಳುಗಳು) ಲೇಖಕಿಯರು ಈ ವರ್ಗದಲ್ಲಿದ್ದಾರೆ.

---

೧. ನರಸಿಂಹಮೂರ್ತಿಯವರ ಅತ್ಯುತ್ತಮ ಸಣ್ಣಕತೆಗಳು, ಪು. ೯.
೨. ಅದೇ, ಪು. ೧೦.

ಬಂಡಾಯ ಚಳವಳಿ ಕಾವ್ಯ ಪ್ರಧಾನವೆಂಬಂತೆ ಕಂಡರೂ ಕತೆ ಕಾದಂಬರಿಗಳು ಹೊಸ ಸತ್ವದಿಂದ ಕೂಡಿದ್ದವು. ಶಿಕ್ಷಣ ಪಡೆದ ಗ್ರಾಮೀಣ ಕೆಳವರ್ಗದ ಲೇಖಕರು ಕತೆ-ಕಾದಂಬರಿಗಳು ಪ್ರಕಟಿಸುತ್ತಿದ್ದರು. ದೇವನೂರು ಮಹಾದೇವ, ನಾಗಾವಾರ, ಬೆಸಗರಹಳ್ಳಿ ರಾಮಣ್ಣ, ಬರಗೂರು ರಾಮಚಂದ್ರಪ್ಪ, ತೇಜಸ್ವಿ ನವ್ಯದ ತಾತ್ವಿಕ ಬಿಕ್ಕಟ್ಟನ್ನು ಪರಿಹರಿಸಿಕೊಂಡು ಬಂಡಾಯದ ಧ್ವನಿಯನ್ನು ವ್ಯಕ್ತಪಡಿಸಿದವರು.

ಬಂಡಾಯದ ಧ್ವನಿ ಮೊದಲು ವ್ಯಕ್ತವಾದುದು ಸಣ್ಣಕತೆಗಳಲ್ಲೇ. ತಂತ್ರ ಸಂಕೇತಗಳಲ್ಲಿ ಮುಳುಗಿ ಯಾಂತ್ರಿಕವಾಗಿದ್ದ ಸಾಹಿತ್ಯವನ್ನು ಸಮುದಾಯದ ಕಡೆಗೆ ತಿರುಗಿಸಿದವರು. 'ಅವನತಿ', ತಬರನಕತೆ, ಬೆಸಗರಹಳ್ಳಿಯವರ ಜೀತ, ಹರಕೆಯ ಹಣ, ಗರ್ಜನೆ ಮುಂತಾದ ಕತೆಗಳು ಇಂತಹವೇ ಆಗಿವೆ.

ಶ್ರೀನಿವಾಸರ ಸಂಪ್ರದಾಯದ ಕತೆಗಳಲ್ಲಿಯೂ ಮಾರ್ಕ್ಸ್, ಏಂಜೆಲ್ಸ್ ಅವರ ಆರ್ಥಿಕ ಸಿದ್ಧಾಂತ ಪ್ರಗತಿಶೀಲ ಕತೆಗಳಲ್ಲಿಯೂ, ಪ್ರಾಯ್ಡ್ ಯಾಂಗ್‌ರವರ ಮನೋವಿಜ್ಞಾನ ಸಿದ್ಧಾಂತಗಳು ನವ್ಯಕತೆಗಳಲ್ಲಿಯೂ ಸ್ಪಷ್ಟವಾಗಿಯೇ ಕಂಡುಬರುತ್ತವೆ.[೧]

ಕತೆಯು ಮೊದಲು ಜನರಿಂದ ಜನರಿಗೆ ಜನಪದರಲ್ಲಿ ಜನ್ಮ ತಳೆದು ಅನೇಕ ವರ್ಷಗಳ ಬಳಿಕ ಅಕ್ಷರದಲ್ಲಿ ಮೂಡಿತು. ಇಂಗ್ಲೆಂಡಿನಲ್ಲಿ ಸಣ್ಣಕತೆ ಏಳನೆ ಅಥವಾ ಎಂಟನೇಯ ಶತಮಾನದಲ್ಲಿ ಆರಂಭವಾದರೂ, ಸರಿಯಾಗಿ ಅದು ೧೭ನೇಯ ಶತಮನದಲ್ಲಿ ಕಾಲೂರಿತೆಂದು ವಿದ್ವಾಂಸರ ಅಭಿಮತ. ಈ ಹಿನ್ನಲೆಯಲ್ಲಿ ಪ್ರಕಟವಾದ ಪ್ಯಾಲೇಸ್ ಆಫ್ ಪ್ಲೆಜರ್' ಅನೇಕ ಕತೆಗಳ ಆಗರವಾಗಿದೆ.

ಫ್ರೆಂಚ್ ಸಾಹಿತ್ಯದಲ್ಲಿ ಸಣ್ಣಕತೆಯು ೧೯ನೇ ಶತಮಾನದಲ್ಲಿ ಆರಂಭವಾಯಿತು. ರಷ್ಯಾದಲ್ಲಿ ೧೮ನೇಯ ಶತಮಾನದಲ್ಲಿ ಪ್ರಾರಂಭವಾದರೂ ಅದೊಂದು ಗದ್ಯಪ್ರಕಾರವಾಗಿ ೧೯ನೇಯ ಶತಮಾನದಲ್ಲಿ ರೂಪಿತವಾಯಿತೆಂದು ವಿದ್ವಾಂಸರ ಅಭಿಮತ.

ಹೀಗೆ ಜಗತ್ತಿನಾದ್ಯಂತ ಸಣ್ಣ ಪುಟ್ಟ ರಾಷ್ಟ್ರಗಳಲ್ಲಿಯೂ ಕತೆಗಳು ಇದ್ದು, ಕ್ರಮೇಣ ೧೭ರಿಂದ ೧೯ನೇ ಶತಮಾನದ ನಡುವೆ ಆಧುನಿಕ ಸಣ್ಣಕತೆಗಳು ಸ್ಪಷ್ಟ ಅಸ್ತಿತ್ವವನ್ನು ಪಡೆದುಕೊಳ್ಳುವ ಮೂಲಕ ತುಂಬ ಗಮನವನ್ನು ಸೆಳೆದವು.

ಇವೆಲ್ಲವುಗಳಿಂದ ಪ್ರೇರಿತರಾದ ಕನ್ನಡಿಗರು ಸಣ್ಣಕತೆಗಳನ್ನು ಆರಂಭಿಸಿದರು. ವಿದೇಶಿ ಪಾದ್ರಿಗಳು ಕ್ರಿಯಾಶೀಲತೆಯಿಂದ ಅನೇಕ ರೀತಿಯ ಬದಲಾವಣೆಯನ್ನು

೧. ನರಸಿಂಹಮೂರ್ತಿಯವರ ಅತ್ಯುತ್ತಮ ಸಣ್ಣಕತೆಗಳು, ಪು. ೧೦.

ತರಲು ಮುಂದಾದರು. ಈ ಹಿನ್ನಲೆಯಲ್ಲಿ ಪತ್ರಿಕೋದ್ಯಮ, ಪುಸ್ತಕೋದ್ಯಮ ಮುದ್ರಣಾಲಯಗಳು ಕನ್ನಡ ನಾಡಿನಲ್ಲಿ ಹೊಸಗಾಳಿ ಬೀಸಲು ತೊಡಗಿದವು. ಈ ಹಿನ್ನಲೆಯಲ್ಲಿ ತೆನಾಲಿ ರಾಮಕೃಷ್ಣನ ಹಾಸ್ಯರಸ ಕತೆಗಳು, ಬೆಳವಾಡಿಕತೆಗಳು, ಅನುವಾದಗೊಂಡು ಪ್ರಕಟವಾದವು. ಶಿವಕೋಟ್ಯಾಚಾರ್ಯರ 'ವಡ್ಡಾರಾದನೆ' ಕೆಂಪುನಾರಾಯಾಣನ ಮುದ್ರಾಮಂಜೂಷ, ಮುದ್ದಣ್ಣನ 'ರಾಮಾಶ್ವಮೇಧ' ಕೃತಿಗಳು ಗದ್ಯಪ್ರಕಾರದ ಬೆಳವಣಿಗೆಗೆ ಕಾರಣವಾದವು. ಅಲ್ಲದೆ ಬಂಗಾಳಿ, ಮರಾಠಿಯ ಮೂಲಕ ಕನ್ನಡಕ್ಕೆ ಬಂದ ಕಾದಂಬರಿಯ ಪ್ರಕಾರವು ಸಣ್ಣಕತೆಯ ಉಗಮಕ್ಕೆ ಮತ್ತು ವಿಸ್ತರಣೆಗೆ ಪೂರಕ ಮಾರ್ಗವೊಂದನ್ನು ನಿರ್ಮಿಸಿತು.

ಆಧುನಿಕ ಕನ್ನಡ ಸಣ್ಣಕತೆಯ ಬೆಳವಣಿಗೆಯನ್ನು ನಾಲ್ಕು ಪ್ರಮುಖ ಸಂವೇದನೆಗಳ ಹಿನ್ನಲೆಯಲ್ಲಿ ಗುರುತಿಸಬಹುದು.

೧) ನವೋದಯ ಯುಗ

೨) ಪ್ರಗತಿಶೀಲ ಯುಗ

೩) ನವ್ಯಯುಗ

೪) ಬಂಡಾಯ ದಲಿತ ಸಾಹಿತ್ಯ ಚಳವಳಿ

ನವೋದಯ ಯುಗವು ೧೯ನೇಯ ಶತಮಾನದ ಆರಂಭದ ನಾಲ್ಕು ದಶಕಗಳಾಗಿದ್ದು ಈ ಅವಧಿಯಲ್ಲಿ ವಿವಿಧ ಬಗೆಯ ಸಣ್ಣಕತೆಗಳು ರಚಿತವಾಗಿವೆ. ಮಂಗಳಾಂಭೆ 'ಸುವಾಸಿನಿ' (೧೯೦೦) ಮಾಸಿಕದಲ್ಲಿ ಪ್ರಕಟವಾದ ಪಂಜೆಮಂಗೇಶರಾಯರ 'ನನ್ನ ಚಿಕ್ಕತಾಯಿ' 'ಭಾರತ ಶ್ರಾವಣ' ಮತ್ತು 'ಕಮಲಾಪುರದ ಹೊಟೇಲ್‌ನಲ್ಲಿ' ಮೊದಲಾದವು ಚಾರಿತ್ರಿಕವಾಗಿ ಆಧುನಿಕ ಕನ್ನಡದ ಮೊದಲ ಕತೆಗಳೆಂಬ ಹೆಗ್ಗಳಿಕೆಗೆ ಪಾತ್ರವಾಗಿವೆ.[೧]

ನವೋದಯ ಎಂದರೆ ಸಾಮಾನ್ಯವಾಗಿ ಪ್ರಕೃತಿ, ರಮಣೀಯತೆ, ಪ್ರೀತಿ–ಪ್ರೇಮ, ಕುಟುಂಬ ವ್ಯಕ್ತಿ, ಪ್ರೇಮ–ಕಾಮ, ಲಿಂಗಬೇಧ, ಪುರೋಹಿತಶಾಹಿತ್ವ, ಮನುಷ್ಯಕೇಂದ್ರಿತ ಹಿನ್ನಲೆಯಲ್ಲಿ ರೂಪಿತವಾಗುತ್ತಿದ್ದ ಕತೆಗಳಾಗಿದ್ದವು.

ಕಾದಂಬರಿಯನ್ನು ಮತ್ತು ಕಾವ್ಯವನ್ನು ಮೀರಿ ಸಣ್ಣಕತೆ ಜನಪ್ರಿಯವಾಗುತ್ತಿದೆ. ಕಾರಣ ಜನರು ಯಾಂತ್ರಿಕ ಜೀವನದ ಯುಗದಲ್ಲಿ ಸಮಯದ ಅಭಾವ ಹಾಗೂ

---

೧. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯಕೋಶ, ಪು. ೮೮.

ನಗರೀಕರಣ ಮತ್ತು ಕೈಗಾರಿಕಾ ಕ್ರಾಂತಿಯ ಕಾರಣದಿಂದಾಗಿ ಸಣ್ಣಕತೆಯತ್ತ ವಾಲುತ್ತಿದ್ದಾರೆ.

"ಎಡ್ಗರ್ ಅಲನ್ ಪೋ ಹೇಳುವಂತೆ 'ಸಣ್ಣಕತೆ ಓದಿ ಮುಗಿಸಲು ಅರ್ಧಗಂಟೆಯಿಂದ ಹಿಡಿ ಒಂದು ಗಂಟೆ ಬೇಕಾಗುವ ಗದ್ಯಕಥನ, ಇನ್ನೊಂದು ಹೇಳಿಕೆಯಂತೆ ಒಂದೆ ಸಲಕ್ಕೆ ಓದಿ ಮುಗಿಸಬಹುದಾದ ಕತೆ ನಿಜವಾದ ಸಣ್ಣಕತೆ."[೧]

ಸಣ್ಣಕತೆಗೆ ಪ್ರತಿಯೊಬ್ಬರು ಆಕರ್ಷಿತರಾಗಿದ್ದಾರೆ, ಕಾರಣ ಸರಳ ಗದ್ಯಭಾಷೆ, ಮಿತಪಾತ್ರಗಳು, ವಸ್ತು ಸನ್ನಿವೇಶಗಳು ಸಹೃದಯರಿಗೆ ಹಿಡಿಸುತ್ತವೆ. ಕನ್ನಡದಲ್ಲಿ 'ಮಯೂರ', 'ತುಷಾರ' ಎಂಬ ತಿಂಗಳ ಪತ್ರಿಕೆಗಳು ಸಣ್ಣಕತೆಗಳ ಪ್ರಕಟಣೆಗಾಗಿಯೇ ಮೀಸಲಿದೆ ಎಂದರೆ ಕನ್ನಡದ ಕಥಾಜಗತ್ತಿನ ವಿಶೇಷ ಕಾಳಜಿ ಅರ್ಥವಾಗದಿರದು. ಐತಿಹಾಸಿಕ, ಸಾಮಾಜಿಕ, ವೈಜ್ಞಾನಿಕ ಮುಂತಾದ ಯಾವುದೇ ವಸ್ತುವನ್ನು ಕುರಿತು ಸಣ್ಣಕತೆ ತನ್ನ ಪರಿಣಾಮವನ್ನು ಬೀರಬಲ್ಲದ್ದಾಗಿದೆ.

"ಕನ್ನಡದಲ್ಲಿ ಕಮಲಾಪುರದ ಹೋಟಲಿನಲ್ಲಿ (ಪಂಜೆ)) ವೆಂಕಟಿಗನ ಹೆಂಡತಿ (ಮಾಸ್ತಿ), 'ಧನಿಯನ ಸತ್ಯನಾರಾಯಣ' (ಕೊರಡ್ಕಲ್ ಶ್ರೀನಿವಾಸರಾವ್), ನಾನು ಕೊಂದ ಹುಡುಗಿ (ಅನಂದ) ಧನ್ವಂತರಿ ಚಿಕಿತ್ಸೆ (ಕುವೆಂಪು), ಕೊನೆಯ ಗಿರಾಕಿ (ನಿರಂಜನ) ಗಿರಿಜಾ ಕಂಡ ಸಿನಿಮಾ (ಕಟ್ಟೀಮನಿ) ಮೌನಿ (ಅನಂತಮೂರ್ತಿ) ರಾಕ್ಷಸ (ಶಾಂತಿನಾಥದೇಸಾಯಿ) ಅವನತಿ (ತೇಜಸ್ವಿ) ಗೀಜಗನ ಗೂಡು (ಶ್ರೀ ಕೃಷ್ಣ ಆಲನಹಳ್ಳಿ), ಜಲದ ಕಣ್ಣು (ಸುಧಾಕರ), ದೇವರ ಹೆಣ (ಕುಂವೀರಭದ್ರಪ್ಪ) ಕಪ್ಪು ನೆಲದ ಕೆಂಪುಕಾಲು (ಬರಗೂರು ರಾಮಚಂದ್ರಪ್ಪ) ಕೂಡಿಕೆ (ಕಾಳೇಗೌಡ ನಾಗವಾರ) ಮಾರಿಕೊಂಡವರು (ದೇವನೂರ ಮಹಾದೇವ), ವಿಯೋಗ (ಕರೀಗೌಡ ಬೀಚನಹಳ್ಳಿ), ಮಣ್ಣು ಸೇರಿತು ಬೀಜ (ಅಮರೇಶ ನುಗೆಡೋಣಿ), ಭತ್ತ (ಮೊಗಳ್ಳಿ ಗಣೇಶ) ಮುಂತಾದ ಕೆಲವು ಪ್ರಮುಖ ಸಣ್ಣಕತೆಗಳನ್ನು ಹೆಸರಿಸಬಹುದು ಮುಸ್ಲಿಂ ಬರಹಗಾರರ ಕತೆಗಳು ಕನ್ನಡದಲ್ಲಿ ವಿಭಿನ್ನ ನೆಲೆಯಾಗಿವೆ.[೨]

ಆಕ್ಸ್‌ಫರ್ಡ್ ಡಿಕ್ಸನರಿಯಲ್ಲಿ Short ಪದಕ್ಕೆ ಕೊಡುವ ಅರ್ಥ 1. Measuring little from end to end in space or time 2) Not reaching the usual started or required. 3) Saying little or saying much in few words ಎಂಬುದಾಗಿವೆ. ಈ ಹೇಳಿಕೆಗಳನ್ನು ಸಣ್ಣಕತೆಗೆ ಅನ್ವಯಿಸಿದಾಗ ಗಮನಿಸಬೇಕಾದ ಅಂಶಗಳೆಂದರೆ

೧. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯಕೋಶ, ಪು. ೮೮
೨. ಅದೇ, ಪು. ೮೮ ಮತ್ತು ೮೯.

೧) ಸಣ್ಣಕತೆ ಸ್ಥಳ, ಕಾಲಗಳನ್ನು ತೀರ ಚಿಕ್ಕ ಪ್ರಮಾಣದಲ್ಲಿ ಉಪಯೋಗಿಸಿಕೊಳ್ಳುತ್ತದೆ. ೨) ಅದು ಅಪೇಕ್ಷಿತ ಅಥವಾ ನಿರೀಕ್ಷಿತ ಮಿತಿಗಳನ್ನು ತಲುಪುವುದಿಲ್ಲ. ೩) ಸ್ವಲ್ಪ ಪದಗಳಲ್ಲಿಯೇ ಅನೇಕ ವಿಷಯಗಳನ್ನು ಸೆರೆಹಿಡಿಯುತ್ತದೆ. ಕನ್ನಡದ ಸಣ್ಣಕತೆಗೆ ಕಿಟ್ಟೆಲ್ ಡಿಕ್ಸ್‌ನರಿಯಲ್ಲಿ ಈ ಅರ್ಥಗಳಿವೆ. Small, tiny, minute, thin, delicate, slender, narrow.

ಕನ್ನಡದಲ್ಲಿ ಸಣ್ಣಕತೆಯ ಉಗಮವನ್ನು ಕ್ರಿ.ಶ. ೯ನೇಯ ಶತಮಾನದ ಶ್ರೀವಿಜಯ ವಿರಚಿತ ಕವಿರಾಜಮಾರ್ಗದಲ್ಲಿ ಗದ್ಯ ಕವಿಗಳನ್ನು ಹೆಸರಿಸಿದ್ದಾರೆ. ಜಯಬಂಧು, ದುರ್ವಿನೀತ ಉಲ್ಲೇಖಿಸಿದ್ದಾನೆ. ದುರ್ವಿನೀತ ಪೈಶಾಚಿ ಭಾಷೆಯಲ್ಲಿ ಗುಣಾಢ್ಯನ ಬೃಹತ್ಕಥೆಯನ್ನು ಕನ್ನಡಕ್ಕೆ ಅನುವಾದಿಸಿರಬೇಕೆಂದು ವಿದ್ವಾಂಸರು ಊಹಿಸಿದ್ದಾರೆ. ನಂತರ ದೊರಕುವುದು, ಶಿವಕೋಟ್ಯಾಚಾರ್ಯರ ವಡ್ಡಾರಾಧನೆ ೧೯ ಉಪಸರ್ಗ ಕೇವಲಿಗಳ ಕತೆಯನ್ನು ಒಳಗೊಂಡಿದೆ.

ಪ್ರಗತಿಶೀಲ ಕ್ಷೇತ್ರದಲ್ಲಿ ಮೊದಲಿಗರ ಅ.ನ.ಕೃಷ್ಣರಾಯರು ಅನೇಕ ಸಣ್ಣಕತೆಗಳನ್ನು ಪ್ರಗತಿಶೀಲ ದೃಷ್ಟಿಯಿಂದ ರಚಿಸಿದ್ದರು. ಪಾಪಪುಣ್ಯ, ಅಗ್ನಿಕನ್ಯೆ, ಮಿಂಚುಶಿಲ್ಪ, ಕಿಡಿ, ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ. ಇವರ ಕತೆಗಳಲ್ಲಿ ಶೋಷಿತವರ್ಗದ ಸಮಸ್ಯೆಗಳಿಗೆ ಹಾಗೂ ಸಾಮಾಜಿಕತೆಯ ಬಗ್ಗೆ ಸಣ್ಣಕತೆಯಲ್ಲಿ ಅಭಿವ್ಯಕ್ತಿಸಿದ್ದಾರೆ.

ತ.ರಾ.ಸುಬ್ಬರಾಯರು 'ರೂಪಸಿ', 'ತೊಟ್ಟಿಲು ತೂಗಿತ್ತು', 'ಗಿರಿಮಲ್ಲಿಗೆಯ ನಂದನದಲ್ಲಿ', 'ಇದೇ ನಿಜವಾದ ಸಂಪತ್ತು' ನಾಲ್ಕು ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ. ಇವರ ಕತೆಗಳಲ್ಲಿ ಭಾವನೆಗಳಿಂದ ಮತ್ತು ಪ್ರತಿಮೆಗಳಿಂದ ಕತೆಯನ್ನು ಬೆಳೆಸುವ ತಂತ್ರಗಾರಿಕೆ ಅಮೋಘವಾದದ್ದು.

ಚದುರಂಗರವರ ಸ್ವಪ್ನಸುಂದರಿ, ಶವದಮನೆ, ಇಣುಕುನೋಟ, ಬಂಗಾರದ ಹೆಜ್ಜೆ, ಮೀನಿನ ಹೆಜ್ಜೆ, ಬಣ್ಣದ ಬೊಂಬೆ ಎಂಬ ಕಥಾಸಂಕಲನಗಳು ಪ್ರಕಟಿಸಿದ್ದಾರೆ. ಚದುರಂಗರ ಕತೆಗಳಲ್ಲಿ ಅನ್ಯಾಯ, ಅಸಮಾನತೆ, ಮನುಷ್ಯತ್ವದಿಂದ ನೋಡುವುದು ಚದುರಂಗರ ವೈಶಿಷ್ಟ್ಯವಾಗಿದೆ.

ಪ್ರಗತಿಶೀಲ ತತ್ವಗಳನ್ನು ರೂಢಿಸಿಕೊಂಡು ಏಕಾತಾನತೆಯಿಂದ ಸನ್ನಿವೇಶ, ಸಂದರ್ಭ, ವಸ್ತುಗಳನ್ನು ಗ್ರಹಿಸಿ ಅಭಿವ್ಯಕ್ತಿಸುವ ಕಲೆಗಾರಿಕೆ ಬಸವರಾಜ ಕಟ್ಟಿಮನಿಯವರದು. ಮೊನಚಾದ ಭಾಷೆಯಿಂದ ಅನ್ಯಾಯ, ಅಸಮಾನತೆಯ ವಿರುದ್ಧ ಸಣ್ಣಕತೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ನವ್ಯ ಸಾಹಿತ್ಯ ಕಾಲಘಟ್ಟದಲ್ಲಿ ನವೋದಯ ಮತ್ತು ಪ್ರಗತಿಶೀಲರ ವಿಚಾರಗಳಿಂದ ದೂರನಿಂತು ಮನುಷ್ಯತ್ವಕ್ಕೆ ಮತ್ತು ಚಿಂತನೆಗೆ, ವ್ಯಕ್ತಿಗೆ ವಿಶೇಷವಾದವನ್ನು ಕೊಟ್ಟು ಸಣ್ಣಕತೆ ರಚಿಸಿದ್ದಾರೆ. ಈ ಹಿನ್ನೆಲೆಯಲ್ಲಿ ರಾಮಚಂದ್ರ ಶರ್ಮರವರು ಮೊದಲಿಗರಾಗಿ ಕಂಡುಬರುತ್ತಾರೆ. ಇವರ ಕತೆಗಳಲ್ಲಿ ಮನುಷ್ಯನ ದುಃಖ ದುಮ್ಮಾನದ ತುಮುಲಗಳನ್ನು ಕಾಣಬಹುದು ಇವರ ಕತೆಗಳಲ್ಲಿ ನಲವತ್ತು ಕತೆಗಳು, ಬೆಳಗಾಯಿತು ಕತೆಗಾರನ ಕತೆ ಮುಖ್ಯವಾದವುಗಳು.

ಯು.ಆರ್.ಅನಂತಮೂರ್ತಿಯವರ ಎಂದೆಂದೂ ಮುಗಿಯದ ಕತೆ, ಮೊದಲ ಕಥಾ ಸಂಕಲನ, ಮಾಗಿ, ಆಕಾಶ ಮತ್ತು ಬುಕ್ಕಿ ಸೂರ್ಯನ ಕುದುರೆ ಕತೆಗಳಲ್ಲಿ ಪರಂಪರೆಯ ಬಗ್ಗೆ ಬರೆದಿದ್ದಾರೆ.

ನವ್ಯಕತೆಗಾರರಲ್ಲಿ ಪ್ರಮುಖರಾದವರು ಪಿ.ಲಂಕೇಶ್‌ರವರು. ಅವರ ಕತೆಗಳಲ್ಲಿ ಒಳಿತುಕೆಡಕುಗಳ ಬಗೆಗೆ, ಹಳ್ಳಿಯಿಂದ ನಗರಕ್ಕೆ ಬಂದ ವ್ಯಕ್ತಿ ನಗರದಲ್ಲಿ ಬೇರೂರಲು ನಡೆಸುವ ಹೋರಾಟ ಮುಂತಾದವುಗಳ ಬಗ್ಗೆ ಸಣ್ಣಕತೆಗಳನ್ನು ರಚಿಸಿದ್ದಾರೆ. ಇವರು ಕೆರೆಯ ನೀರನ್ನು ಕೆರೆಗೆ ಚೆಲ್ಲಿ, ನಾನಲ್ಲಿ, ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ, ಕಲ್ಲು ಕರಗುವ ಸಮಯ ಮುಂತಾದ ಕಥಾ ಸಂಕಲನಗಳನ್ನು ಬರೆದಿದ್ದಾರೆ.

ಯಶವಂತ್ ಚಿತ್ತಾಲರು ಕತೆಯಾದಳು ಹುಡುಗಿ, ಚೀನ್ಯಾ, ಸಂದರ್ಶನ, ಆತ, ಸಿದ್ಧಾರ್ಥ, ಕುಮಟೆಗೆ ಬಂದ ಕಿಂದರಿಜೋಗಿ, ಸಂಕಲನಗಳ ಕತೆಗಳಲ್ಲಿ ಅನುಭವದ ಸಾರವನ್ನು ಉಣಬಡಿಸಿದ್ದಾರೆ.

ಶಾಂತಿನಾಥ ದೇಸಾಯಿಯವರ ಕ್ಷಿತಿಜ, ರಾಕ್ಷಸ, ದಂಡೆ, ಕೂರ್ಮಾವತಾರ, ಪರಿವರ್ತನತೆಗಳಲ್ಲಿ ಮನಸ್ಸಿನಲ್ಲಿರುವ ತಾರ್ಕಿಕತೆ ಸೂಕ್ಷ್ಮವಾಗಿ ಅಭಿವ್ಯಕ್ತಿಸಿದ್ದಾರೆ.

ದಲಿತ ಬಂಡಾಯ ಕತೆಗಳ ಸನ್ನಿವೇಶದಲ್ಲಿ ಪ್ರಮುಖವಾದ ಹೆಸರು ಬರಗೂರು ರಾಮಚಂದ್ರಪ್ಪ, ಬಂಡಾಯ ಸಾಹಿತ್ಯವನ್ನು ಹುಟ್ಟಿಹಾಕಿ ಬೆಳೆಸಿದವರು. ಸುಂಟರಗಾಳಿ, ಕಪ್ಪು ನೆಲದ ಕೆಂಪು ಕಾಲು, ಬಯಲಾಟದ ಭೀಮಣ್ಣ ಮುಂತಾದ ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ. ಇವೇ ಸಂದರ್ಭದಲ್ಲಿ ಹೆಸರಿಸಬಹುದಾದ ಮತ್ತೊರ್ವ ಪ್ರಮುಖವಾದ ಹೆಸರು ಮೊಗಳ್ಳಿಗಣೇಶ. ಬುಗುರಿ, ಭೂಮಿ, ಅತ್ತೆ ಎಂಬ ಮೂರು ಕಥಾಸಂಕಲನಗಳನ್ನು ರಚಿಸಿದ್ದಾರೆ. ಹೀಗೆ ಕನ್ನಡ ಸಾಹಿತ್ಯ ಸಣ್ಣಕತೆಯ ಸಾಹಿತ್ಯ ಕೃಷಿಯಲ್ಲಿ ಬೆಳೆದುಬಂದ ಮಾರ್ಗವನ್ನು ಎಳೆಎಳೆಯಾಗಿ ಗುರುತಿಸಬಹುದಾಗಿದೆ.

# ಅಧ್ಯಾಯ – ೩
# ನೇಮಿಚಂದ್ರರ ಪರಿಚಯ

ಆಧುನಿಕ ಕನ್ನಡ ಸಾಹಿತ್ಯದ ೩ನೇ ತಲೆಮಾರಿನ ಲೇಖಕಿಯರಲ್ಲಿ ಒಬ್ಬರಾದ ಕತೆಗಾರ್ತಿ, ಅಂಕಣಗಾರ್ತಿ, ತಂತ್ರಜ್ಞೆ ನೇಮಿಚಂದ್ರರವರು ಹುಟ್ಟಿದ್ದು ಚಿತ್ರದುರ್ಗದಲ್ಲಿ. ತಂದೆ ಪ್ರೊ. ಜಿ.ಗುಂಡಣ್ಣ, ತಾಯಿ ತಿಮ್ಮಕ್ಕ. ಪ್ರಾರಂಭಿಕ ಶಿಕ್ಷಣವನ್ನು ತುಮಕೂರು, ಮೈಸೂರಿನಲ್ಲಿ ನಡೆಸಿದರು. ಮೈಸೂರಿನ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರಿಂಗ್‌ನಿಂದ ಬಿಇ ಪದವಿ. ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಿಂದ ಎಂ.ಎಸ್. ಪದವಿ ಪಡೆದ ಇವರು ಉದ್ಯೋಗಕ್ಕಾಗಿ ಎಚ್.ಎ.ಎಲ್. ಸಂಸ್ಥೆಯನ್ನು "ಹೆಲಿಕ್ಯಾಪ್ಟರ್ ಡಿಸೈನ್ ಬ್ಯೂರೋ"ದಲ್ಲಿ ಮುಖ್ಯ ವ್ಯವಸ್ಥಾಪಕಿಯಾಗಿ ಕಾರ್ಯನಿರ್ವಹಣೆ ಮಾಡುತ್ತಿದ್ದಾರೆ..

ಇವರ ಇಷ್ಟವಾದ ಕ್ಷೇತ್ರಗಳೆಂದರೆ ಸಾಹಿತ್ಯ, ಪ್ರವಾಸ ವಿಜ್ಞಾನ, ಮಹಿಳಾ ಅಧ್ಯಯನ ಕರ್ನಾಟಕ ಲೇಖಕಿಯರ ಸಂಘದ ಕಾರ್ಯದರ್ಶಿಯಾಗಿ, 'ಅಚಲಾ' ಮಹಿಳಾ ಅಧ್ಯಯನ ಮಾಸ ಪತ್ರಿಕೆಯ ಸಂಪಾದಕೀಯ ಮಂಡಲಿಯ ಸದಸ್ಯೆಯಾಗಿ, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, 'ನೆರವು' ಹಿತರಕ್ಷಣಾ ವೇದಿಕೆಗಳ ನಿಕಟ ಸಂಪರ್ಕ ಮತ್ತು ಒಡನಾಟ ಇರಿಸಿಕೊಂಡಿದ್ದಾರೆ. ಇವರ ವಿಜ್ಞಾನ ಸಾಹಿತ್ಯ, ಮಹಿಳಾ ಅಧ್ಯಯನ ಕುರಿತಂತೆ ಹಲವಾರು ಲೇಖನಗಳು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಿತವಾಗಿವೆ.

**ನೇಮಿಚಂದ್ರರವರ ಪ್ರಕಟಿತ ಕೃತಿಗಳು:** ಕಥಾಸಂಕಲನ – ನಮ್ಮ ಕನಸುಗಳಲ್ಲಿ ನೀವಿದ್ದೀರಿ, ಮತ್ತೆ ಬರೆದ ಕತೆಗಳು, ಒಂದು ಶ್ಯಾಮಲ ಸಂಜೆ, ನೇಮಿಚಂದ್ರ ಕತೆಗಳು (ಇಲ್ಲಿಯವರೆಗಿನ) ಮುಂತಾದವು. ಸಂವೇದನಾ ಸೂಕ್ಷ್ಮತೆ, ಸಂಯಮ, ಮನಸ್ಸಿನ ವ್ಯಾಪಾರಗಳ ವಿಶ್ಲೇಷಣೆಯಿಂದ ಕೂಡಿದ ಕತೆಗಳು. ಸಂಪಾದಿತ ಕೃತಿ–ಬೆಳಗೆರೆ ಜಾನಕಮ್ಮ ಬದುಕು ಬರಹ, ಅಂತರ ಶಿಸ್ತೀಯ ಅಧ್ಯಯನ & ಸಾಹಿತ್ಯ ಮತ್ತು ವಿಜ್ಞಾನ, ಜೀವನಚರಿತ್ರೆ, ನೋವಿಗದ್ದಿದ ಕುಂಚ (ಪ್ರಸಿದ್ಧ ಚಿತ್ರಕಾರ ವ್ಯಾನ್‌ಗೊ) ಬೆಳಕಿಗೊಂದುಕಿರಣ (ಮೇರಿಕ್ಯೂರಿ) ಥಾಮಸ್ ಆಲ್ವಾ ಎಡಿಸನ್. **ವೈಜ್ಞಾನಿಕ ಕೃತಿಗಳು** – ನಿಮ್ಮ ಮನೆಗೊಂದು ಕಂಪ್ಯೂಟರ್, ಎಲೆಕ್ಟ್ರಾನಿಕ್ಸ್ ಮತ್ತು ಕಂಪ್ಯೂಟರ್, ಅನುವಾದ ನನ್ನ ಕತೆ. ನಮ್ಮ ಕತೆ, ಪ್ರವಾಸ ಸಾಹಿತ್ಯ – ಒಂದು ಕನಸಿನ ಪಯಣ, ತೆರುವಿನ ಪವಿತ್ರ ಕಣಿವೆಯಲ್ಲಿ (ಅಂಕಣ ಬರಹ) ಬದುಕು ಬದಲಿಸಬಹುದು, ಇಪ್ಪತ್ತು ಕೃತಿ ಪ್ರಕಟಿತ.

**ಸಂದ ಪ್ರಶಸ್ತಿಗಳು:** ಬೆಳಕಿಗೊಂದು ಕಿರಣ ಮೇರಿಕ್ಯೂರಿ ಹಾಗೂ ಪೆರುವಿನ ಪವಿತ್ರ ಕಣಿವೆಯಲ್ಲಿ ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 'ಒಂದು ಕನಸಿನ ಪಯಣ' ಕೃತಿಗೆ ಮಾತೋಶ್ರೀ ರತ್ನಮ್ಮ ಹೆಗ್ಗಡೆ ಪ್ರಶಸ್ತಿ 'ಮತ್ತೆ ಬರೆದ ಕತೆಗಳು' ಕಥಾಸಂಕಲನಕ್ಕೆ 'ಆರ್ಯಭಟ ಪ್ರಶಸ್ತಿ', ವಿಜ್ಞಾನ ಸಾಹಿತ್ಯ, ಮಹಿಳಾ ಅಧ್ಯಯನಕ್ಕಾಗಿ ಸಂದೇಶ ಪ್ರಶಸ್ತಿ ದೊರಕಿದೆ.

**ಸಾಹಿತ್ಯ ರಚನೆ**

೧) ಕಾದಂಬರಿ

೨) ಕಥಾಸಂಕಲನ

೩) ಜೀವನ ಚರಿತ್ರೆ

೪) ಪ್ರವಾಸ ಕಥನ

೫) ಪ್ರಬಂಧ

**ಕಾದಂಬರಿ:** ಯಾದ್ ವಶೇಮ್

**ಕಥಾಸಂಕಲನ**

ನಮ್ಮ ಕನಸುಗಳಲ್ಲಿ ನೀವಿದ್ದೀರಿ

ಮತ್ತೆ ಬರೆದ ಕತೆಗಳು

ಕಳೆಯ ಬೇಕಿದ್ದ ನಿನ್ನ ಜೊತೆಯಲಿ ಒಂದು ಶ್ಯಾಮಲ ಸಂಜೆ

ನೇಮಿಚಂದ್ರರ ಕತೆಗಳು

**ಜೀವನ ಚರಿತ್ರೆ**

ಬೆಳಗೆರೆ ಜಾನಕಮ್ಮ

ಬೆಳಕಿಗೊಂದು ಕಿರಣ ಮೇರಿಕ್ಯೂರಿ

ಥಾಮಸ್ ಆಲ್ವಾ ಎಡಿಸನ್

ಡಾ. ಈಡಾ ಸ್ಕಡರ್

ನೊಬೆಲ್ ಪಾರಿತೋಷಕ ವಿಜೇತ ಮಹಿಳಾ ವಿಜ್ಞಾನಿಗಳು

ನನ್ನಕತೆ... ನಮ್ಮ ಕತೆ

**ಪ್ರವಾಸ ಕಥನ**

ಒಂದು ಕನಸಿನ ಪಯಣ

ಪೆರುವಿನ ಪವಿತ್ರ ಕಣಿವೆಯಲ್ಲಿ

**ಪ್ರಬಂಧ**

ಸಾಹಿತ್ಯ ಮತ್ತು ವಿಜ್ಞಾನ

ಬದುಕು ಬದಲಿಸಬಹುದು (ಅಂಕಣ ಸಂಗ್ರಹ)

ದುಡಿವ ಹಾದಿಯಲಿ ಜೊತೆಯಾಗಿ (ದುಡಿವ ದಂಪತಿಗಳಿಗಾಗಿ)

ಮಹಿಳಾ ಅಧ್ಯಯನ

ಎಲೆಕ್ಟ್ರಾನಿಕ್ಸ್ ಮತ್ತು ಕಂಪ್ಯೂಟರ್ಸ್

ನೇಮಿಚಂದ್ರರವರ ಕತೆಗಳು ಹೈಸ್ಕೂಲು, ಪಿಯುಸಿ ಹಂತದಲ್ಲಿ ಪ್ರಕಟವಾಗ-ತೊಡಗಿದವು. ಇಲ್ಲಿವರೆಗಿನ ನೇಮಿಚಂದ್ರರ ಕತೆಗಳು ಕೃತಿಯಲ್ಲಿ ನೇಮಿಚಂದ್ರರವರೇ ಹೀಗೆ ಹೇಳುತ್ತಾರೆ. "ಹೇರಿದ್ದ ಮಡಿವಂತಿಕೆಯನ್ನು ಬಾಲ್ಯದಲ್ಲಿ ಹೊತ್ತವಳು. ಅಂಜುತ್ತಾ, ಅಳುಕುತ್ತಾ ಬರೆಯಲು ಪ್ರಾರಂಭಿಸಿದ್ದೆ 'ಹೆಣ್ತನಕ್ಕೆ' ಅಂಟಿಸಿದ್ದ ಅಡ್ಡಿಆತಂಕಗಳ ನಡುವೆಯೇ ಬರೆಯತೊಡಗಿದ್ದೆ. ಭಯ, ಸಂಕೋಚ, ಮುಜುಗರಗಳನ್ನು ಬದಿಗಿತ್ತು ನನಗನಿಸಿದ್ದನ್ನು, ಅನಿಸಿದಂತೆ ಬರೆಯತೊಡಗಿದ್ದೆ. ಬಿ.ಇ ಮುಗಿಸಿ ಸಂಶೋಧನೆಗೆಂದು ಬೆಂಗಳೂರಿಗೆ ಟಾಟಾ ಇನ್‌ಸ್ಟಿಟ್ಯೂಟಿಗೆ ಬಂದಾಗ ಸ್ವತಂತ್ರ ವಾತಾವರಣದಲ್ಲಿ ಆರ್ಥಿಕ ಸ್ವಾವಲಂಬನೆಯಲ್ಲಿ ನನ್ನ ಭಾವನೆಗಳು ಹೊರಬಿದ್ದವು. ಪ್ರೀತಿ ಎಂಬ ಪದವನ್ನು ಬಳಸಲೂ ಹಿಂಜರಿದ ಹುಡುಗಿ, ಪ್ರೀತಿಯ ಸುತ್ತ ಕತೆ ಹೆಣೆದಳು. 'ನಮ್ಮ ಕನಸುಗಳಲ್ಲಿ ನೀವಿದ್ದೀರಿ' ನನ್ನ ಮೊದಲ ಕಥಾಸಂಕಲನ. ಹೈಸ್ಕೂಲು ಹಂತದಲ್ಲಿ ಬರೆದ ಕತೆಗಳಿಂದ ಹಿಡಿದು ಇತ್ತೀಚೆಗೆ ಪ್ರಕಟವಾದ ಕತೆಗಳು ಇಲ್ಲಿವೆ."[೧]

ಇದು ನೇಮಿಚಂದ್ರರವರನ್ನು ಕುರಿತಾದ ಒಂದು ಪಕ್ಷಿನೋಟ.

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೬.

# ಅಧ್ಯಾಯ – ೪

# ನೇಮಿಚಂದ್ರರವರ ಕತೆಯಲ್ಲಿನ ಧೋರಣೆಗಳು

ಆಧುನಿಕ ಕನ್ನಡ ಕತೆಗಾರ್ತಿಯರಲ್ಲಿ ವಿಶಿಷ್ಟ ನಿರೂಪಣಾ ಶೈಲಿಯಲ್ಲಿ ತನ್ನದೇ ಆದ ಛಾಪು ಮೂಡಿಸಿರುವ ನೇಮಿಚಂದ್ರರವರ ಕತೆಗಳನ್ನು ಅಧ್ಯಯನ ನಡೆಸಿ, ಆ ಕತೆಗಳನ್ನು ಅಭಿವ್ಯಕ್ತಿಸಿರುವ ಶೈಲಿಯನ್ನು ಇಲ್ಲಿ ದಾಖಲಿಸಿದ್ದೇನೆ. ಒಂದು ಕತೆ ಬರಿಯ ಕತೆ ಮಾತ್ರವಲ್ಲದೇ ಆ ಕಾಲದ ಸಮಕಾಲೀನ ಬದುಕನ್ನು ಒಳಗೊಂಡಿರುತ್ತದೆ. ಸಂಸ್ಕೃತಿ, ಚಿಂತನೆ, ಆಂತರ್ಯದ ಭಾವನೆಗಳು ಕೂಡ ಕತೆಗಳಲ್ಲಿ ಸ್ಥಾನ ಪಡೆದುಕೊಳ್ಳುತ್ತವೆ. ಆ ಮುಖೇನ ಒಂದು ನಿರ್ಧಿಷ್ಟ ಸನ್ನಿವೇಶಗಳ ಬಗ್ಗೆ ಕತೆಗಾರ್ತಿಯು ಹೊಂದಿರಬಹುದಾದ ನಿಲುವುಗಳನ್ನು ಈ ಮುಖೇನ ಗುರುತಿಸಿಕೊಳ್ಳಬಹುದಾಗಿದೆ. ಅದನ್ನು 'ಧೋರಣೆಗಳು' ಎಂದೂ ಕರೆಯಬಹುದು. ಪ್ರಸ್ತುತ ಈ ಅಧ್ಯಾಯದಲ್ಲಿ ಕತೆಗಾರ್ತಿಯ ಎಲ್ಲಾ ಕತೆಗಳನ್ನು ಅವಲೋಕಿಸಿ ಅಧ್ಯಯನಕ್ಕಾಗಿ ಈ ಕೆಳಕಂಡಂತೆ ವಿಭಾಗಿಸಿಕೊಂಡಿರುತ್ತೇನೆ.

**(೧) ನೇಮಿಚಂದ್ರರವರ ಕತೆಯಲ್ಲಿ ತಾಯ್ತನದ ಚಿತ್ರಣ**

**(೨) ನೇಮಿಚಂದ್ರರವರ ಕತೆಯಲ್ಲಿ ಸ್ತ್ರೀವಾದಿ ಧೋರಣೆಗಳು**

**(೩) ನೇಮಿಚಂದ್ರರವರ ಕತೆಯಲ್ಲಿ ಕ್ರಿಯಾಶೀಲ ಸ್ತ್ರೀಯರು**

**೧. ನೇಮಿಚಂದ್ರರವರ ಕತೆಯಲ್ಲಿ ತಾಯ್ತನದ ಚಿತ್ರಣ:** ನೇಮಿಚಂದ್ರರವರ ಕತೆಗಳನ್ನು ಪರಿಶೀಲಿಸಿದಾಗ ಕಂಡುಕೊಂಡ ಅಂಶವೆಂದರೆ ಇತರೆ ಮೊದಲ ತಲೆಮಾರಿನ ನಂತರದ ಕತೆಗಾರ್ತಿಯರಲ್ಲಿ ಕಾಣಬಹುದಾದ ಮಗು, ಮಕ್ಕಳು, ತಾಯ್ತನದ ಕುರಿತಾದ ಅತೀವ ಕಾಳಜಿ, ಬಯಕೆಗಳನ್ನು ಇವರ ಕತೆಗಳಲ್ಲಿನ ಸ್ತ್ರೀ ಪಾತ್ರಗಳು ಅಷ್ಟಾಗಿ ಬಯಸದೇ ಇರುವುದು. ಮಗು, ಮಕ್ಕಳ ಬಗ್ಗೆ ಅತಿಯಾಗಿ ಆಸೆಪಡದೇ, ಅವುಗಳ ಬಗ್ಗೆ ವಿಪರೀತ ಕನಸು, ವ್ಯಾಮೋಹ ಹೊಂದಿಲ್ಲದೇ ಇರುವುದನ್ನು ಗುರುತಿಸಬಹುದು. ಆದರೂ ಕೆಲವು ಗುರುತಿಸಬಹುದಾದ ಕತೆಗಳೆಂದರೆ 'ನಿನ್ನೆಗಳ ಹೊರೆ ಇಳಿಸಿ' ಎಂಬ ಕತೆಯಲ್ಲಿನ ವಿಜೂ ಉದ್ಯೋಗಸ್ಥ ಮಹಿಳೆ. ಶಾಲೆಯಲ್ಲಿ ಪ್ರಾಧ್ಯಾಪಕಿ. ಬೆಂಗಳೂರಿನಲ್ಲಿ ಸರಣಿ ಬಾಂಬಾ ಸ್ಫೋಟವಾದ ಸಂದರ್ಭದಲ್ಲಿ ತನ್ನ ಪತಿ, ಮಕ್ಕಳು ಸುರಕ್ಷಿತವಾಗಿ ಮನೆಗೆ ಮರಳಲು ಆಕೆ ಮಾಡುವ ಕಾಳಜಿ, ಕಾತುರಗಳು ಒಬ್ಬ ಉತ್ತಮ ತಾಯಿಯ ಸಹಜ

ಆತಂಕಗಳೇ, ಮಗಳು ಚೈತ್ರಾ, ಗಂಡ ಮನೆಗೆ ಬಂದಾಗ ಅವಳ ಎದೆಯ ಭಾರ ಕಡಿಮೆಯಾಗುತ್ತವೆ.

**'ಬದುಕು ಕಾಯುವುದಿಲ್ಲ'** ಕತೆಯಲ್ಲಿನ ಸಂಯುಕ್ತ ಉದ್ಯೋಗಸ್ಥ ಮಹಿಳೆ, ಕಛೇರಿ, ಮನೆ, ನೆರೆಮನೆಯವರ ಸಂಕಷ್ಟಕ್ಕೂ ನೆರವಾಗುವವಳು. ಆದರೆ ಗಂಡ ವಿಶು ಅವಳಿಗೆ ನೆರವಾಗದೇ ತನ್ನದೇ ಕೆಲಸಕಾರ್ಯಗಳಲ್ಲಿ ಮಗ್ನನಾಗಿರುತ್ತಾನೆ. ಸಂಯುಕ್ತ ಮಗು ಮುನ್ನುವಿನ ಸ್ಪೋರ್ಟ್ಸ್ ಡೇ' ಇವತ್ತು ಬಂದುಬಿಡಿ, ಪ್ಲೀಸ್ ಎಂದು ಗಂಡನನ್ನು ಗೋಗರೆದರೂ, ಆತ ಬಿಡುವಿಲ್ಲ ಎಂದಾಗ ವಿಧಿಯಿಲ್ಲದೇ ಸುಮ್ಮನಾಗುತ್ತಾಳೆ. ಮಗುವಿಗೆ ಹುಷಾರಿಲ್ಲ ಎಂದಾಗ ಮೂರು ದಿನ ರಜೆ ಹಾಕಿ ಸುಧಾರಿಸಿದರೂ ಮಗೂಗೆ ಜ್ವರ ವಾಸಿಯಾಗದಿದ್ದಾಗ ಕಂಗಾಲಾಗುತ್ತಾಳೆ. ತುರ್ತುಕಾರ್ಯದ ನಿಮಿತ್ತ ಕಛೇರಿಗೆ ಹೋಗಬೇಕಾದ ಸನ್ನಿವೇಶದಲ್ಲಿ ಗಂಡನಿಗೆ ಒಂದು ದಿನ ರಜೆಹಾಕಲು ಗೋಗರೆಯುತ್ತಾಳೆ. ಆದರೆ ಕೆಲಸದ ನೆಪ ಹೇಳಿ ಆತ ತಪ್ಪಿಸಿಕೊಂಡಾಗ "ನನ್ನದೂ ಒಂದು ಕೆಲಸ ಇದೆ, ಜೊತೆಗೆ ನಮ್ಮದೊಂದು ಮಗು....."[೧] ಎಂದು ವ್ಯಥೆಪಡುತ್ತಾಳೆ. ತಾನೇಕೆ ಅವನಂತೆ ನಡೆದು ಬಿಡಲಾರೆ, ಮಗುವನ್ನು ಸಾಕುವ ಹೊಣೆ ತನಗೊಬ್ಬಳಿಗೆ ಏಕೆ ಎಂಬ ಪ್ರಶ್ನೆ ಅವಳಿಗೆ ಬಿಡದೇ ಕಾಡುತ್ತದೆ. ಫಾರಿನ್ ಡೆಲಿಗೇಷನ್ ಕಛೇರಿಗೆ ಬಂದಾಗ ಹೋಗಲೇಬೇಕಾದ ಅನಿವಾರ್ಯತೆ ಇದೆ. ಆದರೆ ಮಗುವನ್ನು ಒಂಟಿಯಾಗಿ ಬಿಡಲು ಅವನಂತೆ ಜವಾಬ್ದಾರಿಯಿಂದ ನುಣುಚಿಕೊಳ್ಳಲಾಗದೇ ಎದುರು ಮನೆ ಶಶಿಗೆ ಮಗುವನ್ನು ಒಪ್ಪಿಸಿ ಕೆಲಸಕ್ಕೆ ತೆರಳುತ್ತಾಳೆ. ಶಶಿ ಕೂಡ ಉದ್ಯೋಗಸ್ಥೆ, ರಜೆ ಹಾಕಿ ಮಗುವನ್ನು ನೋಡಿಕೊಳ್ಳುವಾಗ ಸಂಯುಕ್ತಗೆ ಅವರಿವರ ಸಹಾಯ ತೆಗೆದುಕೊಳ್ಳಬೇಡ ಎಂದು ಸಲಹೆ ನೀಡುತ್ತಾನೆ. ಆಗ ಸಂಯುಕ್ತ 'ನೀ ರಜೆ ಹಾಕುತ್ತಿದ್ದೆಯೇನು' ಎಂದು ಪ್ರಶ್ನಿಸುತ್ತಾಳೆ. ಅವನು ಉತ್ತರಿಸದಿದ್ದಾಗ "ನನ್ನ ಸಮಸ್ಯೆಗಳು ನಿನ್ನವಲ್ಲದಿದ್ದರೆ, ದಯವಿಟ್ಟು ನನ್ನ ರೀತಿಯಲ್ಲಿ ಪರಿಹರಿಸಿಕೊಳ್ಳೋಕೆ ಬಿಡು"[೨] ಎಂದು ಅವನ ಬಾಯಿ ಮುಚ್ಚಿಸುತ್ತಾಳೆ. ಒಬ್ಬ ಉದ್ಯೋಗಸ್ಥ ಮಹಿಳೆ ಎಲ್ಲ ರೀತಿಯ ಪಾತ್ರವನ್ನು ನಿರ್ವಹಿಸುತ್ತಾ ಮಗುವಿನ ಜವಾಬ್ದರಿ ತಾಯಿಯದೇ ಏಕೆ ಎಂಬ ಪ್ರಶ್ನೆಯ ಜೊತೆಗೆ ಮಗುವಿನ ಆರೋಗ್ಯ, ಇಷ್ಟನಿಷ್ಟದ ಬಗ್ಗೆ ಆಕೆ ಸದಾ ಕಣ್ತೆರೆದೇ

---

೧. ನೇಮಿಚಂದ್ರ, ಬದುಕು ಕಾಯುವುದಿಲ್ಲ, ಪು. ೭೬.
೨. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೭೭.

ಇರಬೇಕಾದ ಅನಿವಾರ್ಯತೆ, ವರ್ಗಾಯಿಸಲಾರದ ಜವಾಬ್ದಾರಿಯನ್ನು ಈ ಕತೆ ಕಟ್ಟಿಕೊಡುತ್ತದೆ.

**'ಇತಿಹಾಸದಂಚಿನಲಿ......'** ಕತೆಯಲ್ಲಿ ಕಿರಣ್ ಶಶಿ ದಂಪತಿಗಳಿಬ್ಬರೂ ಇಂಜಿನಿಯರ್‌ಗಳು. ಮಗ ರವಿ ಮೇಲೆ ಅಪಾರ ಕಾಳಜಿಯುಳ್ಳವರು. CET, IIT ಮಗ ಪ್ರವೇಶ ಪರೀಕ್ಷೆ ಬರೆದಾಗ ತಂದೆ ಕಿರಣ್‌ಗೆ ಮಗನ ಭವಿಷ್ಯದ ಬಗ್ಗೆ ಅಪಾರ ಆಸಕ್ತಿ ಮುಂದೆ ತಮ್ಮಂತೆಯೇ ಇಂಜಿನಿಯರ್ ಆಗುತ್ತಾನೆಂದು. ಆದರೆ ಶಶಿ "ಅವ ಡಾಕ್ಟರ್, ಇಂಜಿನಿಯರ್ ಆಗದಿದ್ದರೂ ಪರವಾಗಿಲ್ಲ, ಮನುಷ್ಯನಾದರೆ ಸಾಕು......"[೧] ಎನ್ನುತ್ತಾಳೆ. ಮಗ ಫೇಲ್ ಆಗಿದ್ದರೂ ಚಿಂತೆ ಇರುತ್ತಿರಲಿಲ್ಲ. ಆದರೆ ಅವನು ಪರೀಕ್ಷೆಗೆ ಹಾಜರಾಗಿಲ್ಲ ಎಂಬ ವಿಷಯ ತಿಳಿಯುತ್ತಲೇ ಕೋಪಾವೇಶಕ್ಕೆ ಒಳಗಾಗದೇ ತಮ್ಮ ತಪ್ಪೇನು ಎಂಬ ವಿಶ್ಲೇಷಣೆಗೆ ತಾಯಿ ಶಶಿ ತೊಡಗುತ್ತಾಳೆ. ಇವತ್ತು ನಾವು ಆವೇಶಕ್ಕೆ ಒಳಗಾಗಿ ಸಹನೆ ಕಳೆದುಕೊಂಡರೆ ಮಗುನನ್ನು ಕಳೆದುಕೊಳ್ಳಬೇಕಾದ ಸಮಯ ಎದುರಾಗಬಹುದು ಎಂಬ ಸಹನೆಯನ್ನು ಇಟ್ಟುಕೊಂಡು ಸಂಯಮದಿಂದ ವರ್ತಿಸುತ್ತಾಳೆ. ಮಗ ಡಿಗ್ರಿ ಮಾಡ್ದೋರ್ಗೆ ಕೆಲ್ಸ ಸಿಗಲ್ಲ ಎಂದು ಉತ್ತರಿಸಿದಾಗ ಎಸ್.ಎಸ್.ಎಲ್.ಸಿ. ಓದಿ ಏನಾಗ್ತೀಯಾ ಎಂದು ಪ್ರಶ್ನಿಸುತ್ತಾಳೆ. ಮಗ ಬಿಸಿನೆಸ್ ಮಾಡ್ತೀನಿ ಎಂದಾಗ ತಾಳ್ಮೆಯಿಂದ ತಾನೂ ಮಗುವಿನಂತೆ ಮಾತನಾಡುತ್ತಾಳೆ. ತನಗೂ ಚಿಕ್ಕವಳಿದ್ದಾಗ ಪರೀಕ್ಷೆ ಎಂದರೆ ಭಯವಾಗುತ್ತಿತ್ತೆಂದು ಹೇಳಿ ಅವನ ಮನದ ಭಯವನ್ನು ಹೋಗಲಾಡಿಸಲು ಯತ್ನಿಸುತ್ತಾಳೆ. ಇಲ್ಲಿ ತಾಯಿಯ ಸಂಯಮ, ತಾಳ್ಮೆ, ತಮ್ಮ ಮಗ ಪೋಲಿ ಅಲ್ಲ, ಡ್ರಗ್ ಅಡಿಕ್ಟ್ ಅಲ್ಲ ಎಂಬುದನ್ನು ಅರಿತು ಅವನನ್ನು ಪ್ರೇರೇಪಿಸಲು ಆಕೆ ಕೈಗೊಳ್ಳುವ ಚಿಂತನೆ ಮುಖ್ಯವಾದದ್ದು. ಗಂಡ ಕಿರಣ್ ಜೊತೆಗೆ "ಕಿರಣ್ ನಮ್ಮ ಹಾದಿಯಲ್ಲಿ, ನಮ್ಮ ಚಿಂತನೆಗೆ ಎಟುಕುವಷ್ಟು, ಸರಿ ಅನಿಸುವಂತೆ ಬೆಳೆಸೋಣ, ಅವನ ಭವಿಷ್ಯವೆಲ್ಲ ನಮ್ಮ ಕೈಯಲ್ಲಿದೆ. ನಾವು ನಿರೂಪಿಸಬೇಕು ಎಂಬ ಭ್ರಮೆ ಬಿಡೋಣ. ಇದು ಅವನ ಬದುಕು ಕೂಡಾ ಅವನು ರೂಪಿಸಿಕೊಳ್ಳಬೇಕಾದ ಬದುಕು. ಅವನ ಸೋಲುಗಳನ್ನೆಲ್ಲ ನಮ್ಮ ಸೋಲೆನಿಸಿ ತಲ್ಲಣಿಸೋದು ಬೇಡ"[೨] ಎಂದು ಗಂಡನಿಗೆ ಸಮಾಧಾನಪಡಿಸುತ್ತಾಳೆ. ಇಲ್ಲಿ ಪ್ರಬುದ್ಧ ತಾಯಿಯೊಬ್ಬಳ ಚಿತ್ರಣವನ್ನು ಕಾಣಬಹುದು.

---

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೯೦.
೨. ನೇಮಿಚಂದ್ರ, ಇತಿಹಾಸದಂಚಿನಲಿ, ಪು. ೧೦೧.

ನೇಮಿಚಂದ್ರರವರ ಕತೆಗಳಲ್ಲಿನ ನಾಯಕಿಯರು ತಾಯಂದಿರು ಉದಾತ, ಪ್ರೌಢಚಿಂತನಾ ಸ್ತ್ರೀಯರು. **'ನೆನಪಿನಂಗಳದಲ್ಲಿ ನೂರುಚಿತ್ತಾರ'** ಕತೆಯಲ್ಲಿನ ಚಿಕ್ಕ ವಯಸ್ಸಿನ ಬಾಲೆಯೊಬ್ಬಳು ತಮ್ಮ ಟೈಪಿಂಗ್ ಇನ್‌ಸ್ಟ್ರಕ್ಟರ್ ಮನುವಿನ ಆಕರ್ಷಣೆಗೆ ಒಳಗಾಗಿ ಆತ ನಿರಾಕರಿಸಿದಾಗ ತಲ್ಲಣ, ದುಃಖಕ್ಕೆ ಒಳಗಾಗುತ್ತಾಳೆ. ಈ ಸನ್ನಿವೇಶದಲ್ಲಿ ಮಗಳಿಗೆ ಬೈದು, ಹೊಡೆದು ಬುದ್ಧಿ ಹೇಳುವ ತಾಯಂದಿರೇ ಹೆಚ್ಚು. ಆದರೆ ಇಲ್ಲಿನ ತಾಯಿ ಹದಿಹರೆಯದಲ್ಲಿ ಆಸೆ ಆಕಾಂಕ್ಷೆಗಳನ್ನು ಅರಿತವಳು, ಮಗಳು ನಾ ಮುಂದೆ ಮದುವೇನೆ ಆಗೋಲ್ಲ ಎಂದಾಗ "ಮಹಾರಾಯ್ತಿ, ನೀನೇನು ಪಂಚ ಪತಿವ್ರತೆಯರ ಸಾಲಲ್ಲಿ ನಿಲ್ಲ ಹೊರಟಿದ್ದೀಯಾ? ಇಲ್ಲ ಮರಳಲ್ಲಿ ಮಡಕೆ ಮಾಡಬೇಕೆ....."[೧] ಎಂದು ಸಾಂತ್ವಾನ ಹೇಳುತ್ತಾಳೆ. ತನ್ನ ನೆನಪಿನ ಇತಿಹಾಸದಲ್ಲೂ ಪ್ರೀತಿ ಇದ್ದುದ್ದನ್ನು ತಿಳಿಸಿಹೇಳುತ್ತಾಳೆ. ತನ್ನನ್ನು ಪ್ರೀತಿಸಿದವರ, ತಾನು ಪ್ರೀತಿಸಿದವರ ಮನೆ, ಊರಿಗೆಲ್ಲ ಮಗಳು ಬೇಬಿಯನ್ನು ಕರೆದೊಯ್ದು ಪರಿಚಯಿಸುತ್ತಾಳೆ. ಮಗಳು ದುಃಖಕ್ಕೀಡಾದ ಸನ್ನಿವೇಶದಲ್ಲಿ ತಾನೂ ಕೂಡ ಹಿಂದೆ ನಿನ್ನಂತೆ ದುಃಖಕ್ಕೀಡಾದದ್ದನ್ನು ಅರ್ಥೈಸುತ್ತಾಳೆ.

"ಯೌವ್ವನದ ಬಣ್ಣಗಳಿಗೆ ಕುರುಡಾಗಬೇಕಿಲ್ಲ. ಈ ಭಾವನೆಗಳನ್ನು ಬಿಡು ಅವು ಕುಡಿದು ಕುಪ್ಪಳಿಸುವಷ್ಟು. ಆದರೆ ಯಾವುದೇ ನಿರ್ಧಾರದ ಹಗ್ಗದಲ್ಲಿ ಬಿಗಿದು ಕಟ್ಟಬೇಡ"[೨] ಮತ್ತೆ ಮಾನಸಿಕವಾಗಿ ಚೇತರಿಸಿಕೊಳ್ಳಲು ಸಹಕಾರಿಯಾಗುತ್ತಾಳೆ. ಈ ಕೆಲಸವನ್ನು ಒಬ್ಬ ಸಮರ್ಥ ತಾಯಿ ಮಾತ್ರ ಮಾಡಲು ಸಾಧ್ಯ ಎಂಬುದು ಈ ಕತೆಯಲ್ಲಿ ಚಿತ್ರಿತವಾಗಿದೆ.

**'ಕಳೆಯಬೇಕಿದೆ ನಿನ್ನ ಜೊತೆಯಲ್ಲಿ ಒಂದು ಶ್ಯಾಮಲ ಸಂಜೆ'** ಎಂಬ ಕತೆಯಲ್ಲಿ ಅಹಲ್ಯೆ ಎಂಬ ಕಥಾನಾಯಕಿಯನ್ನು ಆಕೆಯ ಗಂಡ ನಿರಾಕರಿಸಿ ಬೇರೊಬ್ಬಳೊಡನೆ ವಾಸಿಸಹೊರಡುತ್ತಾನೆ. ಮೊದಲಿನಿಂದಲೂ ಓದು, ಸಂಪ್ರದಾಯದಲ್ಲಿಯೇ ಬೆಳೆದ ಅಹಲ್ಯೆಗೆ ಗಂಡನ ಡೈವೋರ್ಸ್ ಅರಗಿಸಿಕೊಳ್ಳಲಾಗಲಿಲ್ಲ. ಮಾನಸಿಕ ಖಿನ್ನತೆಗೆ ಒಳಗಾದ ಆಕೆ ಕೈಯಲ್ಲಿ ಕೆಲಸವಿದ್ದರೂ ಮುದ್ದಾದ ಮಗುವಿದ್ದರೂ ಅದನ್ನು ಚಿಂತಿಸದೇ ಕೌಟುಂಬಿಕ ವಾತಾವರಣಕ್ಕೆ ಮುಕ್ತಾಯ ಹಾಡಿ ಆಧ್ಯಾತ್ಮ ದೀಕ್ಷೆ ಪಡೆದು ಉತ್ತರದ ಹಿಮಾಲಯಕ್ಕೆ ಹೊರಟುಬಿಡುತ್ತಾಳೆ. ಮಗುವಿನ ಜವಾಬ್ದಾರಿ ಬಗ್ಗೆ ಗೆಳತಿ ಪ್ರಶ್ನಿಸಿದಾಗ ಅಜ್ಜಿ ಇದ್ದಾಳೆ ಎನ್ನುತ್ತಾಳೆ. ತಂದೆಯೊಡನೆ ತಾಯಿಯನ್ನು ಕಳೆದುಕೊಳ್ಳಬೇಕೆ?

---

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೧೧೮.
೨. ಅದೇ., ಪು. ೧೩೨.

ಎಂದಾಗ 'ಅವರವರ ಹಣೆಯ ಬರಹದೊಡನೆ ಹುಟ್ಟಿ ಬಂದವರು ಅವರು ಕೇಳಿ ಪಡೆದ ಬದುಕು ಇದು'[೧] ಎನ್ನುತ್ತಾಳೆ. ನಿನ್ನ ತಾಯ್ತನದ ಕರ್ತವ್ಯವಿಲ್ಲವೇ ಎಂದಾಗ 'ಕೇಳಿದೆಯಾ' ಎಂದು ಗೆಳತಿಗೆ ರೇಗುತ್ತಾಳೆ. ಮನೆಯನ್ನು ಬಿಟ್ಟು ಹೊರಡುವಾಗ ಮಗಳ, ತಾಯಿಯ ಅಗಲಿಕೆಗೆ ಅಳುತ್ತಾಳೆಂದುಕೊಂಡರೆ ವಿರಕ್ತ, ನಿರ್ಲಿಪ್ತ ಭಾವ-ದೊಂದಿಗೆ ಮನೆಬಿಡುತ್ತಾಳೆ. ಗಂಡನ ಮೋಸದಿಂದ ಅಂತರ್ಮುಖಿಯಾದ ಅಹಲ್ಯೆಗೆ ತಾಯ್ತನ ಜಾಗೃತವಾಗಿ ಕರ್ತವ್ಯಗಳು ನೆನಪಾಗುವುದಿಲ್ಲ. ಅವನಿಗೆ ಬೇಕಿಲ್ಲದ ಈ ಜೀವನದಲ್ಲಿ ನನ್ನದೇನು ಪಾಲು ಎಂಬ ಸತ್ಯ ಅರಿತು ವೈರಾಗ್ಯಹೊಂದುತ್ತಾಳೆ. ಇಲ್ಲಿ ತಾಯ್ತನದ ತುಡಿತಕ್ಕಿಂತ ವೈಯಕ್ತಿಕ ಸಾಂತ್ವಾನವೇ ಅವಳಿಗೆ ಮುಖ್ಯವಾಗುತ್ತದೆ.

**'ನೆನಪುಗಳು ನೋಯಲಿಲ್ಲ'** ಕತೆಯಲ್ಲಿ ಸಾವಿತ್ರಿ ಎಂಬಾಕೆಯು ಬರೆದ ಡೈರಿಯನ್ನು ಅವಳ ಮಗಳು ಶಾಮೋನಿ ಅಮ್ಮನ ಒಪ್ಪಿಗೆ ಇಲ್ಲದೇ ಓದಿಬಿಡುತ್ತಾಳೆ. ತನ್ನ ಮಗಳು ತಾನು ಬರೆದ ಕಹಿ ಸತ್ಯವನ್ನೆಲ್ಲಾ ಓದಿದ ಮೇಲೆ ತನ್ನ ಬಗೆ ಏನೆಂದು ಕೊಂಡಾಳು ಎಂಬ ಆತಂಕ, ಕಳವಳವನ್ನು ಈ ಕತೆಯಲ್ಲಿ ಬಿಂಬಿಸಲಾಗಿದೆ. ವಿದೇಶ ಪ್ರವಾಸಕ್ಕೆ ಹೋಗಿದ್ದಾಗ ಶಾಮೋನಿ ಎಂಬ ಪ್ರದೇಶಕ್ಕೆ ತೆರಳಿದಾಗ ಅಲ್ಲಿ ಸಾವಿತ್ರಿ ಆಯತಪ್ಪಿ ಪ್ರಪಾತಕ್ಕೆ ಬೀಳುವಾಗ ಗಂಡ ಗೋಪು ಗಾಬರಿಯಿಂದ ಮುಂದುವರಿಯ-ಲಾರದೆ ನಿಂತಿದ್ದಾಗ ರವಿ ಎಂಬಾತ ಸಹೋದ್ಯೋಗಿ ಅವಳನ್ನು ಕಾಪಾಡುತ್ತಾನೆ. ಗಂಡ ತನ್ನನ್ನು ರಕ್ಷಿಸಲಿಲ್ಲ ಎಂಬ ಸಿಟ್ಟಿನಿಂದ ಅವನೊಡನೆ ಮನಬಿಚ್ಚಿ ಮಾತನಾಡದ ಸಾವಿತ್ರಿಯ ಮನಸ್ಸನ್ನು ಮಗಳು ಪ್ರಶ್ನಿಸುತ್ತಾಳೆ. "ಪ್ರೀತಿಸದೇಯಾ ರವಿ ನಿನ್ನ ಉಳಿಸಿದ್ದ, ಬಹುಶಃ ಪ್ರೀತಿಸ್ತಿಯಾ ಅಪ್ಪ....."[೨] ಎಂದು ಮಗಳು ತಾಯಿಯ ನಿಲುವನ್ನು ಕುರಿತು ಪ್ರಶ್ನಿಸಿದಾಗ ಗಂಡನ ಕುರಿತಾದ ಸಿಟ್ಟು, ಕೋಪ ಸಾವಿತ್ರಿ ಕಳೆದುಕೊಳ್ಳುತ್ತಾಳೆ. ತಾಯಿ ಮಾತ್ರ ಮಕ್ಕಳನ್ನು ತಿದ್ದುವುದಲ್ಲ, ತಾಯಿಯ ಕೆಲಸಮಯ ಸಮರ್ಪಕ ನಿರ್ಣಯ ತೆಗೆದುಕೊಳ್ಳದಿದ್ದಾಗ ಮಗಳು ತಾಯಿಯ ತಪ್ಪನ್ನು ತಿದ್ದುವ ಕೆಲಸ ಈ ಕತೆಯಲ್ಲಿ ಚೆನ್ನಾಗಿ ಮೂಡಿಬಂದಿದೆ.

**'ಕಪ್ಪು ಮೋಡ, ಬೆಳ್ಳಿ ಅಂಚು'** ಕತೆಯಲ್ಲಿನ ಶೀಲಾ ಗಂಡ ಡೈವೋರ್ಸ್ ನೀಡಿ ಬೇರೆ ಮದುವೆ ಆಗಲು ಮುಂದಾದಾಗ ಆತ್ಮಹತ್ಯೆ ಮಾಡಿಕೊಳ್ಳುವ ನಿರ್ಧಾರ ಕೈಗೊಳ್ಳುತ್ತಾಳೆ. ನಂತರದ ಕೆಲವು ದಿನ ಅವನು ಡೈವೋರ್ಸ್ ಮಾತೆತ್ತದವನು

---

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೧೬೧.
೨. ಅದೇ, ಪು. ೧೮೦.

ಕೊನೆಗೊಂದು ದಿನ ಮನೆಬಿಟ್ಟು ತೆರಳಿ ಬೇರೊಬ್ಬಾಕೆಯೊಡನೆ ಸಂಸಾರ ಹೂಡಿದಾಗ ಖಿನ್ನತೆ ಹತಾಶೆಗೆ ಒಳಗಾದರೂ ಮಗಳಿಗಾಗಿ ಬದುಕಲು ನಿರ್ಧರಿಸುತ್ತಾಳೆ. ಗಂಡನ ಪರಿಹಾರದ ಹಣವನ್ನು ನಿರಾಕರಿಸಿ ಸ್ವಂತ ಉದ್ದಿಮೆಯಿಂದ ಮುಂದೆ ಬಂದು ಮಗಳ ಬೇಕು ಬೇಡಗಳನ್ನು ಪೂರೈಸುವ ಪಣಕೊಡುತ್ತಾಳೆ.

ಒಟ್ಟಿನಲ್ಲಿ ನೇಮಿಚಂದ್ರರವರ ಕತೆಗಳಲ್ಲಿನ ತಾಯಂದಿರು ಪ್ರಬುದ್ಧ, ಉದ್ಯೋಗಸ್ಥ ಮಹಿಳೆಯರಾಗಿದ್ದು ಪ್ರಗತಿಪರ ಚಿಂತಕರಾಗಿದ್ದು ತಾಯ್ತನದ ಬಗೆಗೆ ಅತಿಯಾದ ಆಸಕ್ತಿ ಹೊಂದದೇ ಇದ್ದರೂ, ಸ್ನೇಹಿತೆಯಂತೆ ಮಕ್ಕಳೊಡನೆ ಬೆರೆತು ನಡೆಯಬೇಕೆಂಬ ಸಂದೇಶವನ್ನು ಈ ಕೆಲವು ಕತೆಗಳಲ್ಲಿ ಗುರುತಿಸಬಹುದು.

**೨. ನೇಮಿಚಂದ್ರರ ಕತೆಯಲ್ಲಿ ಸ್ತ್ರೀವಾದಿ ಧೋರಣೆಗಳು:**

ನವ್ಯಸಾಹಿತ್ಯ ಬರವಣಿಗೆಯ ನಂತರದಲ್ಲಿ ಬರವಣಿಗೆಗೆ ತೊಡಗಿಸಿಕೊಂಡ ನೇಮಿಚಂದ್ರರವರು ಕತೆಗಾರ್ತಿ ವೀಣಾಶಾಂತೇಶ್ವರರಂತೆ ಸ್ತ್ರೀವಾದಿ ನಿಲುವುಳ್ಳ ಕತೆಗಾರ್ತಿಯಾಗಿದ್ದಾರೆ. ಇವರ ಕತೆಗಳಲ್ಲಿನ ಸ್ತ್ರೀಪಾತ್ರಗಳು ಶೋಷಣೆ, ಅನ್ಯಾಯ, ಅಸಮಾನತೆ ಕಂಡಾಗ ಆ ಸ್ತ್ರೀಗಳು ನಡೆದುಕೊಳ್ಳುವ ರೀತಿ ಉತ್ತರಿಸುವ ಧಾಟಿಯನ್ನು ಇಲ್ಲಿ ದಾಖಲಿಸಿದ್ದೇನೆ.

ಮೊದಲಿಗೆ ಸ್ತ್ರೀವಾದಿ ಧೋರಣೆಯೆಂದರೆ ಬಿ.ಎನ್.ಸಾವಿತ್ರಿಬಾಯಿ ಮತ್ತು ಎನ್.ಗಾಯತ್ರಿಯವರ ಪ್ರಕಾರ "ಸಮಾಜದಲ್ಲಿ ಉದ್ಯೋಗದಲ್ಲಿ ಹಾಗೂ ಕುಟುಂಬದಲ್ಲಿರುವ ಮಹಿಳೆಯರ ತುಳಿತ ಹಾಗೂ ಶೋಷಣೆಯ ಬಗ್ಗೆ ಅರಿವು ಮೂಡಿಸಿ ಅದನ್ನು ಬದಲಾಯಿಸುವುದಕ್ಕೆ ಪುರುಷರು ಮತ್ತು ಮಹಿಳೆಯರು ಸೇರಿ ನಡೆಸುವ ಪ್ರಜ್ಞಾಪೂರ್ವಕ ಕ್ರಿಯೆಯೇ ಸ್ತ್ರೀವಾದ"

ಒಟ್ಟಿನಲ್ಲಿ ಸ್ತ್ರೀವಾದಿ ಧೋರಣೆ ಎಂದರೆ ಸ್ತ್ರೀಪರ ನಿಲುವುಳ್ಳ ಯಾರೇ ಆದರೂ ಅವರು ಸ್ತ್ರೀವಾದಿಗಳೆನಿಸಿಕೊಳ್ಳುತ್ತಾರೆ. ಪ್ರಸ್ತುತ ನೇಮಿಚಂದ್ರರವರ ಕತೆಗಳನ್ನು ಅಭ್ಯಸಿಸಿ ಕತೆಗಳಲ್ಲಿನ ಸ್ತ್ರೀಪಾತ್ರಗಳು ಸಂಕಷ್ಟ, ಶೋಷಣೆ, ಅಸಮಾನತೆಯ ಪರಿಸ್ಥಿತಿಗಳು ಎದುರಾದಾಗ ಆಸ್ತ್ರೀಪಾತ್ರಗಳು ಅಭಿವ್ಯಕ್ತಿಸುವ ನಿಲುವನ್ನು ಇಲ್ಲಿ ದಾಖಲಿಸಿದ್ದೇನೆ.

ನೇಮಿಚಂದ್ರರವರ ಬಹುತೇಕ ಕತೆಗಳಲ್ಲಿನ ಸ್ತ್ರೀಪಾತ್ರಗಳು ಉದ್ಯೋಗಸ್ಥ, ವಿದ್ಯಾವಂತ ಮಹಿಳೆಯರು ಮನೆಯ ಒಳಗೂ, ಹೊರಗೂ ದುಡಿಯುವಂತಹವು.

ಎಡೆಬಿಡದೆ ಸದಾ ಕಾಲ ಕೆಲಸಕಾರ್ಯಗಳಲ್ಲಿ ತೊಡಗಿದಾಗ, ಎಲ್ಲಾ ಜವಾಬ್ದಾರಿಗಳು ಸ್ತ್ರೀಯರಿಗೇ ಏಕೆ ಎಂಬ ತುಮುಲಕ್ಕೆ ಒಳಗಾಗುವುದನ್ನು ಇಲ್ಲಿ ಗುರುತಿಸಬಹುದು.

ನಿನ್ನೆಗಳ ಹೊರೆ ಇಳಿಸಿ...... ಎಂಬ ಸಣ್ಣಕತೆಯಲ್ಲಿನ ವಿಜೂ ಬೆಳಿಗ್ಗೆ ಐದು ಗಂಟೆಗೆ ಎದ್ದು ತಿಂಡಿ, ಅಡಿಗೆಯ ತಯಾರಿಯಲ್ಲಿ ತೊಡಗುತ್ತಾಳೆ. ಗಂಡನ ಕ್ಯಾರಿಯರ್ ಸರಿಯಾದ ಸಮಯಕ್ಕೆ ರಎಡಿ ಇಲ್ಲ ಎಂದ ಕೂಡಲೇ ಗಂಡ ಕೋಪದಿಂದ ಕೂಗಾಡುತ್ತಾನೆ. ಆಗ ವಿಜೂ ಒಂದು ನಿಮಿಷ ತಡಿ ನನಗೇನು ನಾಲ್ಕು ಕೈ ಇದೆಯಾ, ಬೆಳಗ್ಗೆ ನಾಲ್ಕಕ್ಕೆ ಎದ್ದು ಮಾಡ್ತೀನಿ, ನಿದ್ದೆ ಅನ್ನುವುದಿಲ್ಲ'[೧] ಎಂದು ಅಸಹನೆಯನ್ನು ವ್ಯಕ್ತಪಡಿಸುತ್ತಾಳೆ. ಒಂಬತ್ತು ಗಂಟೆಗೆ ಫ್ಯಾಕ್ಟ್ರಿಗೆ ಹೋಗುವ ಸಲುವಾಗಿ ಏಳುಗಂಟೆಗೇ ಏಕೆ ಓಡ್ತೀಯಾ? ಐದೂ ಮುಕ್ಕಾಲಿಗೆ ನನ್ನ ಪ್ರಾಣ ತಿನ್ತೀಯಾ' ಎಂದು ರೇಗುತ್ತಾಳೆ. ಇಬ್ಬರೂ ಕೆಲಸಕ್ಕೆ ಹೋಗುವವರಾದರೂ ಮನೆಗೆಲಸದಲ್ಲಿ ಯಾವುದೇ ರಿಯಾಯಿತಿ ಇಲ್ಲದೇ ದಣಿದ, ಆಯಾಸದ ಮಾತುಗಳನ್ನು ಅಸಹನೆಯನ್ನು ಇಲ್ಲಿ ಗುರುತಿಸಬಹುದು. ವಿಜೂನ ತಾಯಿ ಕ್ಯಾನ್ಸರ್‌ನಿಂದ ನರಳಿ ಸತ್ತಾಗ ಅಮೇರಿಕಾದಿಂದ ವಿಜೂನ ಅಣ್ಣ ಬರಲು ಮೂರು ದಿನ ತಡವಾಯಿತು. ಗಂಡು ಹುಡುಗನಂತೆ ತಾಯಿಯನ್ನು ಆಸ್ಪತ್ರೆಗೆ, ಕೀಮೋ ತೆರೆಗೆ ಕರೆದೊಯ್ದು ದಹಿದಾಗ ಆರ್ಥಿಕವಾಗಿಯೂ ಸ್ವಲ್ಪ ತೊಂದರೆ ಅನುಭವಿಸುತ್ತಾಳೆ. ಗಂಡು ಮಗ ಡಾಕ್ಟ್ರ ಓದಲೇ ಬೇಕು ಎಂದು ಹಠ ಹಿಡಿದು ಅವನನ್ನು ಓದಿಸಿದ ತಾಯಿತಂದೆಯವರಿಗೆ ಅಂತ್ಯ ಕಾಲದಲ್ಲಿ ನೆರವಾದದ್ದು ಮಗಳು ವಿಜು. ಅಮೇರಿಕಾದಿಂದ ಅಣ್ಣ 'ಅಷ್ಟು ಸಣ್ಣ ನರ್ಸಿಂಗ್ ಹೋಂಗೆ ಯಾಕೆ ಸೇರಿಸಿದೆ?' ಎಂದಾಗ ವಿಜೂಳ ಸಹನೆಯ ಕೋಟೆ ಒಡೆಯುತ್ತದೆ. "ಅಪ್ಪ ಅಮ್ಮನ ಮೇಲೆ ಅಷ್ಟು ಕಾಳಜಿ ಇದ್ದೋನು ಅಮೇರಿಕೆಗೆ ಏಕೆ ಹೋಗಿ ಕುಳಿತೆ. ಇಲ್ಲಿದ್ದು ನೋಡಿಕೋ ಬೇಕಿತ್ತು. ಇಲ್ಲ ಅಲ್ಲಿಗಾದರೂ ಕರೆದುಕೊಂಡು ಹೋಗಬೇಕಿತ್ತು. ಕೊನೆಗಾಲಕ್ಕೆ ಕೂಗಿದರೂ, 'ಮಗ ಮಗ' ಅಂತ ಹಂಬಲಿಸಿದರೂ ಬರದೆ, ಮಣಾವ ಮೂರು ದಿನಕ್ಕೆ ಬಂದು ಇಳಿದು ಈಗ ಉಪದೇಶ ಕೊಡಬೇಡ[೨] ಎಂದು ಅಸಹನೆಯಿಂದ ನುಡಿಯುತ್ತಾಳೆ. ತಾಯಿಯನ್ನು ನೋಡಿಕೊಳ್ಳುವ ಸಂದರ್ಭದಲ್ಲಿ 'ಗಂಡುಮಗ ಕೊನೆಗಾಲಕ್ಕೆ ಆಗೋನು. ಹೆಣ್ಣುಮಕ್ಕಳೇನು ಪರರ ಮನೆ ಸೇರುತ್ತವೆ ಅಂತಾ ನನ್ನ ಡಾಕ್ಟರ್ ಓದಿಸಲಿಲ್ಲ, ಈಗ ಅನುಭವಿಸಿ[೩] ಎಂದು ಕೋಪದಿಂದ

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೧೩.
೨. ಅದೇ, ಪು. ೨೪.
೩. ಅದೇ, ಪು. ೨೫.

ನುಡಿಯುತ್ತಾಳೆ. ಗಂಡು ಹೆಣ್ಣೆಂಬ ತಾರತಮ್ಯದಿಂದ ತಾನೂ ಡಾಕ್ಟರ್ ಆಗುವ ಅವಕಾಶ ತಪ್ಪಿ ಹೋದದಕ್ಕೆ ಜೊತೆಗೆ ಜವಾಬ್ದಾರಿರಹಿತ ಅಣ್ಣನ ನಡವಳಿಕೆಯಿಂದ ವಿಜೂನ ಆಕ್ರೋಶಭರಿತ ಮಾತುಗಳು ಅಭಿವ್ಯಕ್ತಗೊಂಡಿರುವುದನ್ನು ಇಲ್ಲಿ ಕಾಣಬಹುದು.

ಬದುಕು ಕಾಯುವುದಿಲ್ಲ ಎಂಬ ಕತೆಯಲ್ಲಿನ ಸಂಯುಕ್ತ ಉದ್ಯೋಗಸ್ಥ ಮಹಿಳೆ, ಆಫೀಸ್ ಕೆಲಸದ ಜೊತೆಗೆ ಗಂಡ, ಮಗುವಿನ ಜವಾಬ್ದಾರಿ ನಿಭಾಯಿಸುತ್ತಿರುತ್ತಾಳೆ. ಮಗುವಿಗೆ ಜ್ವರ ಇದ್ದಾಗ ಮೂರು ದಿನ ಸಂಭಾಳಿಸಿದವಳು ಗಂಡನಿಗೆ ಒಂದು ದಿನ ರಜೆ ಹಾಕಿ ಮಗುವನ್ನು ನೋಡಿಕೊಳ್ಳಲು ಹೇಳಿದಾಗ ಗಂಡ ಕೆಲಸದ ನೆಪವೊಡ್ಡಿ ಜವಾಬ್ದಾರಿಯಿಂದ ನುಣುಚಿಕೊಳ್ಳುತ್ತಾನೆ. ಆಗ ವಿಧಿ ಇಲ್ಲದೆ ಎದುರು ಮನೆ ಶಶಿ ಜೊತೆಗೆ ಮಗುವನ್ನು ಬಿಟ್ಟು ಆಫೀಸಿನ ತುರ್ತು ಕೆಲಸಕ್ಕೆ ತೆರಳಿದಾಗ ಗಂಡ ವಿಶೂ ಇದನ್ನು ಟೀಕಿಸುತ್ತಾನೆ. 'ಹಾಗೆಲ್ಲ ಅವರಿವರ ಸಹಾಯ ತಗಳ್ಳೋದು ಸರಿ ಕಾಣಲಿಲ್ಲ. ಅದೂ ಆಕೆ ರಜೆ ಹಾಕಿ.......' ಎಂದಾಗ ಸಂಯುಕ್ತಳ ಕೋಪ ನೆತ್ತಿಗೇರುತ್ತದೆ. "ನನ್ನ ಸಮಸ್ಯೆಗಳು ನಿನ್ನವಲ್ಲದಿದ್ದರೆ, ದಯವಿಟ್ಟು ನನ್ನ ರೀತಿಯಲ್ಲಿ ಪರಿಹರಿಸಿಕೊಳ್ಳೋಕೆ"[೧] ಎಂದು ಗಂಡನ ಬಾಯ್ಮುಚ್ಚಿಸುತ್ತಾಳೆ. ಮಗುವಿನ ಆರೋಗ್ಯ, ಜವಾಬ್ದಾರಿ ತಂದೆಯದೂ ಸಹ ಎಂಬುದನರಿಯದ ಗಂಡುಗರ್ವಕ್ಕೆ ಸಂಯುಕ್ತಳ ಉತ್ತ ಚಾಟಿಯೇಟಿನಂತಿದೆ.

'ನನ್ನೆದೆಯ ಕದನದಲ್ಲಿ' ಎಂಬ ಕತೆಯಲ್ಲಿ ಮಿಹಿಕಾ, ಕಿರಣ್ ದಂಪತಿಗಳು. ಮಕ್ಕಳಿಗೆ ರಜೆ ಇತ್ತೆಂದು ಮಿಹಿಕಾ ಮಂಡ್ಯಕ್ಕೆ ಕರೆದೊಯ್ಯುತ್ತಾಳೆ. ಆದರೆ ಮಂಡ್ಯದಲ್ಲಿ ನೆಂಟರು ಬೇರೆ ಊರಿಗೆ ಹೊರಟು ನಿಂತಾಗ ಮಕ್ಕಳನ್ನು ಕರೆದುಕೊಂಡು ವಾಪಸ್ ಮನೆಗೆ ಬಂದು ಕೀ ತೆಗೆದು ಒಳಬಂದಾಗ ತನ್ನ ಗಂಡ ಕಿರಣ್ ಕೆಲಸದ ಹುಡುಗಿಯ ಮೇಲೆ ಅತ್ಯಾಚಾರ ನಡೆಸುವುದನ್ನು ಗಂಡನ ಬಗ್ಗೆ ಜುಗುಪ್ಸೆ ಭಾವ ತಾಳುತ್ತಾಳೆ. ಗಂಡ ಕಿರಣ್ 'ಅವಳೇ ಮೆಲೆ ಬಿದ್ದು ಬಂದಳು' ಎಂದು ಸಮಜಾಯಿಷಿ ನೀಡಲೆತ್ನಿಸಿದಾಗ ಮುಚ್ಚುಬಾಯಿ, ನಾಯಿಗೂ ಕಡೆ ನೀನು............'[೨] ಎಂದು ಹೊಲಸು ಪದಗಳಿಂದ ಏಕವಚನದಲ್ಲಿ ಬೈಯ್ಯುತ್ತಾಳೆ.

"ನನ್ನ ಓದು, ಡಿಗ್ರಿ, ಕೈಹಿಡಿದ ಗಂಡ ಎಲ್ಲವೂ ಇತರರ ಆಯ್ಕೆಯಾಗಿತ್ತು. ನನ್ನ ಅಭ್ಯಂತರವಿರಲಿಲ್ಲ. ನನ್ನ ನಿರ್ಧಾರಗಳ ಬಗ್ಗೆ ನನಗೆ ವಿಶ್ವಾಸ ಇರಲಿಲ್ಲವೋ, ಅಂಥಾ ಅವಕಾಶಗಳಿರಲಿಲ್ಲವೋ ಅನಿವಾರ್ಯಗಳಿರಲಿಲ್ಲವೋ ಗೊತ್ತಿಲ್ಲ. ಆದರೆ

---

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೭೭.
೨. ಅದೇ, ಪು. ೧೦೫.

ಇಂದು, ಇದು ನನ್ನೊಬ್ಬಳ ನಿರ್ಣಯ"[೧] ಎಂದು ಗಂಡನನ್ನು ಬಿಡುವ ತೀರ್ಮಾನ ತೆಗೆದುಕೊಳ್ಳುತ್ತಾಳೆ. ಇನ್ನು ಮುಂದೆ ತಾನು ಮಿಹಿಕಾ ಮಾತ್ರ ಮಿಹಿಕಾ ಎಸ್. ಕಿರಣ್ ಅಲ್ಲ ಎಂಬ ತೀರ್ಮಾನಕ್ಕೆ ಬರುತ್ತಾಳೆ. ಗಂಡಸು ಏನೇ ತಪ್ಪು ಮಾಡಿದರೂ ಹೆಂಡತಿ ಮುತ್ತೈದೆ ಭಾಗ್ಯಕ್ಕಾಗಿ ಎಲ್ಲ ತಪ್ಪುಗಳನ್ನು ಕ್ಷಮಿಸಿಬಿಡುತ್ತಾಳೆ ಎಂಬ ಗಂಡನ ಅಹಂಗೆ ಈ ಮೂಲಕ ಕೊಡಲಿ ಪೆಟ್ಟು ನೀಡುತ್ತಾಳೆ.

**'ಕಳೆಯಬೇಕಿದೆ ನಿನ್ನ ಜೊತೆಯಲಿ ಒಂದು ಶ್ಯಾಮಲ ಸಂಜೆ'** ಕತೆಯಲ್ಲಿ ಅಹಲ್ಯೆ ಎಂಬ ಉದ್ಯೋಗಸ್ಥ ಹೆಣ್ಣುಮಗಳು ಗಂಡನ ಅಸಡ್ಡೆಗೆ ಕಾರಣಳಾಗುತ್ತಾಳೆ. ಡೈವೋರ್ಸ್ ಸಿಕ್ಕಿದ ನಂತರ ಅಂತರ್‌ಮುಖಿಯಾಗುತ್ತಾಳೆ. ಆಗ ಗೆಳತಿ ಸಾಗರಿಕಾ ಗೆಳತಿಗೆ ಸಾಂತ್ವಾನ ಹೇಳಲು ಮನೆಗೆ ಬಂದಾಗ ಅಹಲ್ಯೆಯ ತಾಯಿ, ಕೆಲಸವಿದ್ದರೂ ಹೆಣ್ಣಿಗೆ ಗಂಡ ಇದ್ದಂತೆ ಆಗುತತಾ ಎಂದು ವೇದನೆ ವ್ಯಕ್ತಪಡಿಸಿದಾಗ "ಏನನ್ನೂ ಕೊಡದ ಗಂಡ ನೆಪಕ್ಕಿದ್ದು ಏನು ಪ್ರಯೋಜನ ಅಮ್ಮ"[೨] ಎಂದು ಪ್ರಶ್ನಿಸುತ್ತಾಳೆ. ಅಹಲ್ಯೆಗೆ ಜೀವನವೇ ಬೇಸರವಾಗುತ್ತವೆ. ಹಾಗಾಗಿ ಸನ್ಯಾಸಿಯಾಗಲು ಹೊರಟೇ-ಬಿಡುತ್ತಾಳೆ. ತನ್ನ ಗಂಡನಿಗೆ ಬೇಡದ ಮೇಲೆ ಈ ಮಗುವನ್ನು ಸಾಕುವ ಜವಾಬ್ದಾರಿ ತನಗೆಬೇಡ ಎಂದು ನಿರ್ಧರಿಸಿ ತಾಯಿಂದ ಬಳಿ ಮಗುವನ್ನು ಬಿಟ್ಟು ದೇಶಾಂತರ ಹೊರಟುಬಿಡುತ್ತಾಳೆ.

**'ನೆನಪುಗಳು ನೋಯಲಿಲ್ಲ'** ಎಂಬ ಕತೆಯಲ್ಲಿನ ಸಾವಿತ್ರಿ ತನ್ನ ಗಂಡ ತಾನು ಅಪಾಯದಲ್ಲಿದ್ದಾಗ ತನ್ನನ್ನು ರಕ್ಷಿಸಲಿಲ್ಲ ಎಂಬ ಕಾರಣಕ್ಕೆ ಗಂಡನ ಪ್ರೀತಿಯಿಂದ ವಿಮುಖಳಾಗಿಬಿಡುತ್ತಾಳೆ. ತನ್ನನ್ನು ಕಾಪಾಡಿದ ರವಿಯನ್ನು ಇಷ್ಟಪಡುತ್ತಾಳೆ. ಮುಂದೆ ಸಾವಿತ್ರಿಗೆ ತನ್ನ ಮಗಳ ಮಾತುಗಳಿಂದ ತನ್ನ ತಪ್ಪಿನ ಅರಿವಾಗಿ ಗಂಡನ ಬಗೆಗಿನ ಮುನಿಸನ್ನು ಕಡಿಮೆಮಾಡಿಕೊಳ್ಳುತ್ತಾಳೆ. ಇಲ್ಲಿ ರಕ್ಷಕನಾಗಬೇಕಾದ ಗಂಡನ ಅಸಹಾಯಕತೆ ಆಕೆಗೆ ರೇಗುವಂತೆ ಮಾಡಿ ಆ ಜಾಗದ ನೆನಪು, ಕುರುಹಿಗಾಗಿ ತನ್ನ ಮಗಳಿಗೆ 'ಶಾಮೋಲಿ' ಎಂಬ ಹೆಸರನ್ನೇ ಇಡುವುದನ್ನು ಇಲ್ಲಿ ಗುರುತಿಸಬಹುದು.

**'ಕಪ್ಪು ಮೋಡ, ಬೆಳ್ಳಿ ಅಂಚು'** ಎಂಬ ಕತೆಯಲ್ಲಿ ಮಧು ಎಂಬ ಒಂದು ಮಗುವಿನ ತಾಯಿ ಗೃಹಿಣಿಯಾಗಿದ್ದು ಗಂಡನ ಅಲಕ್ಷ್ಯಕ್ಕೆ ಗುರಿಯಾಗುತ್ತಾಳೆ. ಗಂಡ ಬೇರೆ ಸಂಸಾರ ಹೂಡದಂತೆ ತಡೆಯಲು ಮಧು ನಿದ್ದೆ ಮಾತ್ರೆ ನುಂಗುತ್ತಾಳೆ. ಕೆಲವು

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೧೧೫..
೨. ಅದೇ, ಪು. ೧೫೫.

ದಿನ ಡೈವೋರ್ಸ್ ಮಾತೆತ್ತದ ಅವನು ಒಂದು ದಿನ ಅವಳನ್ನು ಬಿಟ್ಟು ಬೇರೆ ಮದುವೆ ಆಗುತ್ತಾನೆ. ಆಗ ಮಧುವಿನ ಸ್ನೇಹಿತೆ ಶೀಲ ಮಧುವಿಗೆ ಧೈರ್ಯ, ಸ್ವಂತಿಕೆ ಸ್ವಾಭಿಮಾನ ಕಲಿಸುತ್ತಾಳೆ. "ಒಂದು ತಾಳಿಯಿಂದ, ಒಂದು ಕಾನೂನಿನಿಂದ ಮನುಷ್ಯ ಸಂಬಂಧಗಳನ್ನು ಕಟ್ಟಿಡಲು ಸಾಧ್ಯವೇ? ಅವನಿಗೆ ನೀನು ಬೇಕಿಲ್ಲದ ಮೇಲೆ, ನಿನಗೇಕೆ ಅವನು ಅಷ್ಟುಬೇಕು"[೧] ಎನ್ನುತ್ತಾಳೆ. ಶೀಲಾಳ ಒತ್ತಾಸೆ, ಪ್ರಯತ್ನದ ಫಲವಾಗಿ ಮಧು ಸ್ವಂತ ಗಾರ್ಮೆಂಟ್ ಉದ್ದಿಮೆ ಸ್ಥಾಪಿಸುತ್ತಾಳೆ. ಮಗಳಿಗೆ ಕೇಳಿದ್ದನ್ನು ಕೊಡಿಸುತ್ತಾ ಇರುವಾಗ, ಗಂಡ ತಾನು ಎರಡು ಸಂಸಾರ ತೂಗಿಸಲು ತುಂಬಾ ಕಷ್ಟವಾಗುತ್ತಿದೆ. ಪೇ ರಿವೈಸ್ ಆದರೆ ಸಾವಿರದೈನೂರಕ್ಕಿಂತ ಹೆಚ್ಚು ಕೊಡುತ್ತೇನೆ ಎಂದಾಗ 'ಡೋಂಟ್‌ವರಿ ರವಿ, ನೀನು ನನಗಾಗಿ ಕಳಿಸೋ ಅವಶ್ಯಕತೆ ಇಲ್ಲ. ಆದರೆ ಹಾಂ..... ಈ ಪುಟ್ಟಿ ನನ್ನ ಮಗಳಂತೆ, ನಿನ್ನದೂ ಹೌದು. ಅವಳಿಗೆ ಅಪ್ಪನ ಹಕ್ಕು ಖಂಡಿತಾ ಇದೆ. ನನಗೆ ಕಳಿಸ್ತಾ ಇದ್ದ ಹಣಾನ ಬೇಕಾದ್ರೆ ಅವಳ ಹೆಸರಲ್ಲಿ ಬ್ಯಾಂಕಿಗೆ ಹಾಕು.....'[೨] ಎಂದು ಹಣವನ್ನು ನಿರಾಕರಿಸುತ್ತಾಳೆ.

'ರವಿ, ಅವಲಂಬಿತರು ಎಂದಾದರೂ ತಮ್ಮ ಕಾಲ ಮೇಲೆ ತಾವು ನಿಲ್ಲಲೇಬೇಕು' ಪುಟ್ಟಿ ಹೊರಡೋಣ, ಅಪ್ಪಂಗೆ ಟಾಟಾ ಮಾಡು.....' ಎಂದು ಗಂಡ ರವಿ ನೋಡುತ್ತಿರುವಂತೆಯೇ ಹೊರಟುಬಿಡುತ್ತಾಳೆ. ಗಂಡನನ್ನು ಬಿಟ್ಟಿರಲಾರದೆ ಬದುಕಲಾರೆ ಎಂಬ ತನ್ನ ಹಳೆಯ ನಡವಳಿಕೆಯಿಮದ ಹೊರಬಂದು ಸ್ವಾವಲಂಬಿ ಜೀವನವನ್ನು ರೂಪಿಸಿಕೊಮಡ ಒಬ್ಬ ಯಶಸ್ವಿ ಹೆಣ್ಣಿನ ಚಿತ್ರಣವನ್ನು ಇಲ್ಲಿ ಗುರುತಿಸಬಹುದು.

**'ನನ್ನ ಕನಸುಗಳಲ್ಲಿ ನೀವಿದ್ದಿರಿ'** ಎಂಬ ಕತೆಯಲ್ಲಿನ ಕಾವ್ಯ ಹೊಸದಾಗಿ ಮದುವೆಯಾದ ಸಂದರ್ಭದಲ್ಲಿ ಪಕ್ಕದ ಮನೆಯಾಕೆ ಮಿಸೆಸ್ ಕಿರಣ್ ಎಂದು ಸಂಬೋಧಿಸಿದಾಗ ಕಾವ್ಯಳಿಗೆ ಹಿಂಸೆಯಾಗುತ್ತದೆ. "ನಾನ್ಯಾರದೋ ಮಿಸೆಸ್ ಆಗಿ ಏಕೆ ಗುರುತಿಸಲ್ಪಡಬೇಕು' ಇಂಥಹವರ ಸ್ವತ್ತು ಎಂದು ಸಾರಬೇಕು"[೩] ಎಂದು ಕೇಳುತ್ತಾಳೆ. ಗಂಡ ಕಿರಣ್ ಜೊತೆ ಯಾಂತ್ರೀಕೃತ ಬದುಕನ್ನು ಸಾಗಿಸುವಾಗ ಸುಂದರ್‌ನ ಆಕರ್ಷಣೆಗೆ ಒಳಗಾಗಿ ಗಂಡನನ್ನು ಬಿಟ್ಟು ಹೊರಟುಬಿಡುತ್ತಾಳೆ. "ನನಗೆ ಈ

---

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೨೨೮.
೨. ಅದೇ, ಪು. ೨೪೪.
೩. ಅದೇ, ಪು. ೩೦೧.

ತೂಕಡಿಸುವ ಬದುಕನ್ನು ಒಮ್ಮೆ ಕೆಡವಿ ಏಳಬೇಕಿತ್ತು. ತಣ್ಣಗೆ ಕೊರೆಯುತತಾ ತಿಮಿರವಾಗುತ್ತಿದ್ದ ರಾತ್ರಿಗಳಿಗೆ ಉದ್ವೇಗದ ಶಾಖ ಕೊಡಬೇಕಿತ್ತು"[೧] ಎಂದು ಅವಲ ನಂಬಿಕೆ. ಗಂಡ ತಡವಾಗಿ ಕ್ಲಬ್‌ನಿಂದ ಮನೆಗೆ ಬಂದಾಗ 'ಬರ್ತಾರೇಳು, ಅಲ್ಲೇ ಕ್ಲಬ್‌ನಲ್ಲೇ ತಿಂಡಿ ಕಾಫಿ ಎಲ್ಲ ಆಗಿರುತ್ತೆ, ನಾನು ಹಸಿದು ಕಾಯುವುದರಲ್ಲಿ ಅರ್ಥವಿಲ್ಲ'[೨] ಎಂದು ಊಟ ಮುಗಿಸಿ ಮಲಗುತ್ತಾಳೆ. ಸುಂದರನೊಟ್ಟಿಗೆ ತೆರಳಿ ಅವನ ಜೊತೆಗೆ ಕೆಲ ದಿನಗಳಿದ್ದರೂ ತನ್ನನ್ನು ಅವನಿಗೆ ಒಪ್ಪಿಸಿಕೊಳ್ಳಲಾರದ ಸಾಂಪ್ರದಾಯಕ ನಡೆಯಿಂದ ಮತ್ತೆ ತನ್ನ ಕಿರಣನ ಮನೆಗೆ ವಾಪಸ್ಸಾಗುತ್ತಾಳೆ. ಮಗಳು ಬಿಂಬಳ ಬಗ್ಗೆ ಒಮ್ಮೆಯೂ ಯೋಚಿಸದ ಕಾವ್ಯ ತನ್ನ ಸ್ವಹಿತಾಸಕ್ತಿಗೆ ಹೆಚ್ಚು ಒತ್ತುನೀಡಿ ತನ್ನ ಮರುಪ್ರೇಮಕ್ಕೆ ಗಂಡನ ಒಪ್ಪಿಗೆಗೆ ಕಾಯುತ್ತಾ ಕುಳಿತುಕೊಳ್ಳುತ್ತಾಳೆ. ಇಲ್ಲಿ ಕಾವ್ಯ ಗಂಡನ ಅಲಕ್ಷತನ, ತಡವಾಗಿ ಮನೆಗೆ ಬರುವ ನಡವಳಿಕೆ, ಗಾಢಮೌನ, ಯಾಂತ್ರೀಕೃತ ಜೀವನದಿಂದ ವಿಮುಖಳಾಗಿ ನಡೆಯುವುದನ್ನು ಇಲ್ಲಿ ಗುರುತಿಸಬಹುದು.

**'ತೆರೆಗಳು ಸರಿದವು'** ಎಂಬ ಕತೆಯಲ್ಲಿನ ಅಚಲ ಮೊದಲಿನಿಂದಲೂ ಬುದ್ಧಿವಂತ ವಿದ್ಯಾರ್ಥಿನಿ ಓದಿನಲ್ಲಿ ಸದಾ ಮುಂದಿದ್ದವಳಿಗೆ ಪಿಎಚ್.ಡಿ. ಮಾಡುವುದೇ ಗುರಿಯಾಗಿ ಮುಂದೆ ಇಂಜಿನಿಯರಿಂಗ್ ಕಾಲೇಜಿನಲ್ಲಿ ಲೆಕ್ಚರರ್ ಆಗುತ್ತಾಳೆ. ಓದು, ವಿದ್ಯಾಭ್ಯಾಸ ಸಂಶೋಧನೆಯಲ್ಲಿ ತೊಡಗಿಕೊಂಡವಳಿಗೆ ಮದುವೆ ಮುಂದೂಡುವುದು ಅನಿವಾರ್ಯವಾಗಿರುತ್ತದೆ. ಮುಂದೆ ಅಣ್ಣ, ಅತ್ತಿಗೆ, ಅವರ ಮಕ್ಕಳೊಟ್ಟಿಗೆ ಅವಳ ಜೀವನ ಸಾಗುತ್ತಿರುವಾಗ ಸಹೋದ್ಯೋಗಿ ಪ್ರಕಾಶ್‌ನಿಂದ ಮದುವೆ ಮಾಡಿಕೊಳ್ಳಲು ಪ್ರಪೋಸಲ್ ಬಂದಾಗ ಮೊದಲು ಹಿಂಜರಿದರೂ ನಂತರ ಅಣ್ಣ ಅತ್ತಿಗೆಯರ ಒಪ್ಪಿಗೆ ಕೇಳುತ್ತಾಳೆ. ಅವರಿಬ್ಬರೂ ಅವಳ ಸಂಬಳದ ಹಣವನ್ನು ಬಳಸಿಕೊಳ್ಳುತ್ತಿದ್ದವರು 'ಈಗ ಮದುವೆ ಆಗೋದ್ರಲಿ ಅರ್ಥ ಏನಿದೆ? ನಿನಗೇನೂ ಮಕ್ಕಳಾಗೋ ವಯಸ್ಸಲ್ಲ'[೩] ಎಂದಾಗ "ಮಕ್ಕಳೇ ಸರ್ವಸ್ವ ಅಲ್ಲ ಅತ್ತಿಗೆ, ಅದೂ ನಮ್ಮ ಮಕ್ಕಳೇ ಆಗಬೇಕು ಎಂದೇನು?"[೪] ಎಂದು ಉತ್ತರಿಸುತ್ತಾಳೆ. 'ನನಗೆ ಆವೇಶದ ಹದಿ ವಯಸ್ಸಲ್ಲ, ನನ್ನ ಬದುಕಿಗೂ ಸ್ನೇಹ-ಸಾಂಗತ್ಯ ಬೇಕು'(ಪು. ೩೩೫) ಎಂದು ಮದುವೆಯಾಗಲು ಹೊರಟದಷ್ಟೇ. ಮತ್ತೇನಿಲ್ಲ ಎನ್ನುತ್ತಾಳೆ. ಅಣ್ಣ ಅತ್ತಿಗೆಯರ ಸ್ವಾರ್ಥ, ಸಂಕುಚಿತತೆ

---

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೩೦೭.
೨. ಅದೇ, ಪು. ೧೩.
೩. ಅದೇ, ಪು. ೩೩೪.
೪. ಅದೇ, ಪು. ೩೩೪.

ಅರ್ಥಮಾಡಿಕೊಂಡ ನಂತರ "ನೀವು ಮದುವೆ ಮಾಡೋ ಶ್ರಮವಹಿಸೋ ಅವಶ್ಯಕತೆ ಇಲ್ಲ. ಮುಂದಿನ ಶನಿವಾರ ನಾನು – ಪ್ರಕಾಶ್ ತಿರುಪತಿಯಲ್ಲಿ ವಿವಾಹವಾಗ್ತೇವೆ. ಇಷ್ಟವಿದ್ದರೆ ಬರಬಹುದು, ಒತ್ತಾಯವಿಲ್ಲ"[೧] ಎಂದು ತನ್ನ ತೀರ್ಮಾನವನ್ನು ಸಾರುತ್ತಾಳೆ.

ಮದುವೆಗೆ ಇಂತಿಷ್ಟೇ ವಯಸ್ಸು ಎಂಬುದನ್ನು ಪ್ರಶ್ನಿಸಿ, ಸ್ವಾರ್ಥಪರರಾದ ತನ್ನವರನ್ನು ಕಂಡು ತಾನು ಇಷ್ಟು ದಿನ ಮಾಡಿದ ಸೇವೆಗೆ ಈ ಜನ ಕೊಡುವ ಬೆಲೆ ಇಷ್ಟೇ ಎಂಬುದನ್ನು ತಿಳಿದ ನಂತರ ಅವರನ್ನು ಬಿಟ್ಟು ಹೋಗುವ ನಿರ್ಧಾರ ಕಾವ್ಯ ತೆಗೆದುಕೊಳ್ಳುತ್ತಾಳೆ.

**'ತ್ರಿಕೋನದಾಚೆಗೆ'** ಎಂಬ ಕತೆಯಲ್ಲಿ ತುಷಾರ್ ಎಂಬಾತ ಐವತ್ತು ವರ್ಷದವನಾಗಿದ್ದು ಹೆಂಡತಿ ಲೀಲಾ ಇದ್ದರೂ ಇಪ್ಪತ್ತೆರಡರ ಹರಯದ ವರ್ಷಾಳನ್ನು ಮದುವೆಯಾಗಬಯಸುತ್ತಾನೆ. ವರ್ಷಾಳು ತನ್ನ ತೀರ್ಮಾನ ಕೈಗೊಳ್ಳುವ ಮುಂಚೆ ಲೀಲಾಳನ್ನು ಭೇಟಿಯಾದಾಗ ಲೀಲಾಳ ಮಾತು, ಸತ್ಯತೆ ಅರಿದು ಆತನ ಹಿಡಿತದಿಂದ ಪಾರಾಗಲು ಹವಹಿಸುತ್ತಾಳೆ. "ಈ ಸಂಬಂಧಕ್ಕೆ ಆಯುಷ್ಯವಿಲ್ಲ. ಆದಷ್ಟು ಬೇಗ ನಿನ್ನ ನೆನಪುಗಳ ಆಕ್ಟೋಪಸ್ ಹಿಡಿತದಿಂದ ಬಿಡುಗಡೆಗಾಗಿ ಕಾಯ್ತೇನೆ, ನಾನು ಬರ್ತೀನಿ, ತುಷಾರ್"[೨] ಎಂದು ತನ್ನ ಸ್ವಾಭಿಮಾನವನ್ನು ಕಾಯ್ದುಕೊಳ್ಳಲು ಹೊರಡುತ್ತಾಳೆ. ಈ ಕತೆಯಲ್ಲಿ ಒಂದು ಹೆಣ್ಣಿನ ಶೋಷಣೆಗೆ ಗಂಡು ಮಾತ್ರ ಕಾರಣನಲ್ಲ. ಹೆಣ್ಣು ಜೊತೆಯಾಗಿ ನಿಲ್ಲುತ್ತಾಳೆ ಎಂಬುದು ಕತೆಯಿಂದ ವೇದ್ಯವಾಗುತ್ತದೆ.

ಹೀಗೆ ನೇಮಿಚಂದ್ರರವರ ಕತೆಗಳಲ್ಲಿನ ಸ್ತ್ರೀಯರು ತಮಗೆ ಎದುರಾದ ಸಮಸ್ಯೆ, ಸಂಕಷ್ಟಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಧೈರ್ಯದಿಂದ ಹೋರಾಡುವುದನ್ನು ಕಾಣಬಹುದಾಗಿದೆ.

**(೩) ನೇಮಿಚಂದ್ರರ ಕತೆಯಲ್ಲಿ ಕ್ರಿಯಾಶೀಲ ಸ್ತ್ರೀಯರು:**

ನೇಮಿಚಂದ್ರರವರ ಕತೆಗಳಲ್ಲಿನ ಸ್ತ್ರೀಪಾತ್ರಗಳು ಬಹುತೇಕ ನಾಗರಿಕತೆಯ ಲಕ್ಷಣವುಳ್ಳವಾಗಿದ್ದು, ಬೌದ್ಧಿಕವಾಗಿ ಬೆಳೆದಂತಹವು. ಗಂಡ, ಮನೆ, ಮಕ್ಕಳು ಎಂಬ

---

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೧೩.
೨. ಅದೇ.

ಅವ್ಯಾಹತ ಕೆಲಸಗಳ ನಡುವೆಯೂ ತಮ್ಮ ಸ್ವಂತಿಕೆಗಾಗಿ ಶ್ರಮಿಸುವ, ಹೋರಾಡುವ ಸ್ತ್ರೀಯರನ್ನು ಗುರುತಿಸಬಹುದಾಗಿದೆ.

**'ನಿನ್ನೆಗಳ ಹೊರೆ ಇಳಿಸಿ'** ಕತೆಯಲ್ಲಿನ ವಿಜು ಶಾಲೆಯೊಮದರಲ್ಲಿ ಪ್ರಾಧ್ಯಾಪಕಿ. ಗಂಡ ಸರ್ಕಾರಿ ಕಾರ್ಖಾನೆಯಲ್ಲಿ ಕೆಲಸ ಮಾಡುವಾತ. ತನ್ನ ಮನೆ ಕೆಲಸದಲ್ಲಿ ಯಾವ ರಿಯಾಯಿತಿಯೂ ಇಲ್ಲದೇ ಸಹಕಾರವಿಲ್ಲದೇ ಗಂಡ ಮಕ್ಕಳಿಗೆ ತಿಂಡಿ, ಮಧ್ಯಾಹ್ನದ ಊಟ ಹಾಟ್ ಕೇಸಿಗೆ ತುಂಬಿ ಬ್ಯಾಗಿನಲ್ಲಿರಿಸಿ ಕೈಗೆಟುಕುವಂತಿಡುತ್ತಿದ್ದಳು. ತಾಯಿಯ ಕ್ಯಾನ್ಸರ್ ಖಾಯಿಲೆಗೆ ತುತ್ತಾದಾಗ ಎಡೆಬಿಡದೇ ಮನೆಗೆಲಸ, ಶಾಲೆಯ ಕೆಲಸ, ಆಸ್ಪತ್ರೆಗೆ ಓಡಾಟ, ಮಧ್ಯೆ ಮಧ್ಯೆ ಎದುರಾಗುವ ನಾನಾ ಜವಾಬ್ದಾರಿಯನ್ನು ಹೊಮದಿರುವ ಕ್ರಿಯಾಶೀಲ ಮಹಿಳೆಯಾಗಿ ಈ ಕತೆಯಲ್ಲಿ ಮೂಡಿಬಂದಿದ್ದಾಳೆ.

**'ಮರಳಿ ಬದುಕಿಗೆ ಈ ಪಯಣ'** ಕತೆಯಲ್ಲಿನ ಸುಧಾ, ಕನ್ನಡ, ಇಂಗ್ಲಿಷ್, ಜರ್ಮನ್, ಫ್ರೆಂಚ್ ಭಾಷೆಗಳಲ್ಲಿ ಚಟಪಟ ಮಾತನಾಡುವ ಹುಡುಗಿ. ಸುಧಾ ಕೆಲಸ ಮಾಡುವ ಕಂಪನಿಗೆ ಫ್ರೆಂಚ್ ಫರ್ಮ್ ಒಂದು ಬಂದಾಗ, ಇಂಗ್ಲಿಷ್ ಬಾರದೆ ಅವರು ತಡವರಿಸುವಾಗ, ಅವರದೇ ಭಾಷೆಯಲ್ಲಿ ನೀನು ಸರಾಗವಾಗಿ ನೀಡಿದ 'ಪ್ರಾಜೆಕ್ಟ್ ಪ್ರೊಪೋಸಲ್ ಪ್ರೆಸೆಂಟೇಷನ್' ದಂಗಾಗುವಂತೆ ಮಾಡುವ ಚಾಕಚಕ್ಯತೆ ಅವಳದು. ಒಂದು ದಿನವೂ ರಜೆಗೆ ಪುರುಸೊತ್ತಿಲ್ಲದೇ ದುಡಿಯುವವಳು, ನೆಗೋಷಿಯೇಷನ್‌ಗೆ ಸ್ವೀಡನ್‌ಗೆ ಹೋಗಬೇಕು, ರಿಪು ಐದುಕೋಟಿ ಪ್ರಾಜೆಕ್ಟ್, ಎಂದು ಕೆಲಸದ ಮೇಲೆ ಸದಾ ಜೆಟ್ ವೇಗದಂತೆ ಅವಳ ದಿನಚರಿ. ಆದರೆ ಒಂದು ದಿನ ವಾಕಿಂಗ್‌ಗೆ ಹೋದವಳು ಅಪಘಾತವಾಗಿ ಹಿಂದಿನದೆಲ್ಲಾ ಮರೆತುಬಿಡುತ್ತಾಳೆ. ಅತ್ಯಂತ ಕ್ಷಿಪ್ರ ಕ್ರಿಯಾಶೀಲ ಬದುಕಿನ ಸುಧಾ ಮಗುವಿನಂತೆ ಆಗಿ ಬಿದ್ದಾಗ ರಿಪು ಮಾತ್ರ ಅವಳನ್ನು ಸೇವೆ ಮಾಡುತ್ತಾ ಮಗುವಿನಂತೆ ನೋಡಿಕೊಳ್ಳುತ್ತಾ ಇರುತ್ತಾನೆ. ಅವಳ ನೆನಪಿನ ಶಕ್ತಿ ಬರುವಿಕೆಗಾಗಿ ಕಾಯುತ್ತಾ ನಿಲ್ಲುತ್ತಾನೆ. ಸೇವೆ ತ್ಯಾಗಕ್ಕೆ ಸ್ತ್ರೀಯರು ಮಾತ್ರವಲ್ಲ, ಪುರುಷರಿಗೂ ಅಂತಃಕರಣ, ವಾತ್ಸಲ್ಯ, ತ್ಯಾಗಗುಣ ಇರುತ್ತವೆ ಎಂಬುದು ಈ ಕತೆಯ ಸಾರಾಂಶ.

**'ತಣ್ಣನೆಯ ಕಣಿವೆಯಲ್ಲಿ ಒಂದು ಪ್ರೀತಿಯ ಕನಸು'** ಎಂಬ ಕತೆಯಲ್ಲಿನ 'ಲೇ' ಎಂಬ ಜಾಗದ ಪರಿಸರ, ಅದರ ಗುಣಲಕ್ಷಣಗಳು, ಹವಾಮಾನ ವೈಪರೀತ್ಯ, ಜನಜೀವನ, ಸಾಂಸ್ಕೃತಿಕ ಪರಂಪರೆ, ಜಪದ ವಿಚಾರಗಳು, ಮೂಢನಂಬಿಕೆಗಳು,

ಭೌಗೋಳಿಕ ಹಿನ್ನಲೆ, ಲದಾಕಿ ವ್ಯಕ್ತಿಗಳ ಪ್ರೀತಿಯ ಭಾವನೆ ಚಳಿಗಾಲ, ಮಳೆಗಾಲದ ಬೇಸಿಗೆಕಾಲದ ಅನುಭವಗಳು.

ಇಲ್ಲಿ ಕರ್ನಾಟಕದ ಅದರಲ್ಲೂ ಬೆಂಗಳೂರಿನ ಹುಡುಗಿ ಲದಾಕಿ ವ್ಯಕ್ತಿಯನ್ನು ಪ್ರೀತಿಸಿ ಲೇ.ಯನ್ನು ನೋಡಲು ಮತ್ತು ಪ್ರೀತಿಸಿದ ಹುಡುಗನನ್ನು ಕಾಣಲು ಲೇ.ಗೆ ಹೋಗಿ ಅಲ್ಲಿನ ಪರಿಸರ ಮತ್ತು ಹವಾಮಾನ ವೈಪರೀತ್ಯಕ್ಕೆ ಬೇಸತ್ತು, ಮರಳಿ ಗೂಡಿಗೆ ಅಂದರೆ ಬೆಂಗಳೂರಿಗೆ ಹಿಂದಿರುವುದು ಮತ್ತು ತನ್ನ ಗಾಢವಾದ ಪ್ರೀತಿಗೆ ಒಂದು ರೀತಿಯ ಕಪ್ಪ ಮಸಿಯನ್ನು ಬಳಿಯುವಂತಹ ಸನ್ನಿವೇಶಗಳು, ಸಂದರ್ಭಗಳನ್ನು ಕತೆಗಾರ್ತಿ ತುಂಬ ಅಚ್ಚುಮೆಚ್ಚಾಗಿ, ಅದರಲ್ಲಿ ಕರ್ನಾಟಕದ ಹುಡುಗಿಯ ಪರಿಸರ, ವ್ಯಕ್ತಿತ್ವ, ಕುತೂಹಲತೆ, ಅವಳ ಆಚಾರ ವಿಚಾರಗಳು, ಸಾಂಸ್ಕೃತಿಕ ಪರಂಪರೆಗಳೊಂದಿಗೆ ಬೆಳೆದ ಹುಡುಗಿ ಲೇ ಎಂಬ ಸ್ಥಳ ಆಚಾರವಿಚಾರ ಸಾಂಸ್ಕೃತಿಕ ಪರಂಪರೆಗೆ ಅಲ್ಲಿನ ಹವಾಮಾನ, ಪರಿಸರಕ್ಕೆ ಹೊಂದಿಕೊಳ್ಳುವಲ್ಲಿ ಆಗುವಂತಹ ಕಷ್ಟಗಳನ್ನು ಮತ್ತು ಪ್ರೀತಿ-ಭಾವನೆಗಳನ್ನು ಅದರಲ್ಲೂ ಪ್ರಮುಖವಾಗಿ ಕರ್ನಾಟಕದ ಹೆಣ್ಣಿನ ಭಾವನೆಗಳನ್ನು ತುಂಬ ಸೊಗಸಾಗಿ ಈ ಕತೆಯಲ್ಲಿ ಕತೆಗಾರ್ತಿ ನೇಮಿಚಂದ್ರರವರು ಬರೆಯುತ್ತಾ ಹೋಗುತ್ತಾರೆ. ಈ ದಿಸೆಯಲ್ಲಿ ಕರ್ನಾಟಕದ ಹುಡುಗಿಯ ಅದರಲ್ಲಿ ಬೆಂಗಳೂರಿನ ಹುಡುಗಿಯ ನಾಡಿಮಿಡಿತ, ಒತ್ತ, ಜೀವನ, ಅದೇ ಬಸ್ಸು, ಕಾರು, ಆತೋರೆಗಳೊಂದಿಗೆ ಬೆಳೆದ ವ್ಯಕ್ತಿ ಲೇ.ನಲ್ಲಿ ಹೊಂದಿಕೊಳ್ಳುವಲ್ಲಿ ವಿಫಲವಾದ ಘಟನೆಗಳು ತುಂಬಾ ಸೊಗಸಾದವು.

ಲೇ.ನ ವ್ಯಕ್ತಿ ಹಿಮಾಂಸನನ್ನು ಭೇಟಿಯಾದದ್ದು ಮುಂಬಯಿಯಲ್ಲಿ ವರ್ಕ್‌ಶಾಪ್‌ಗೆ ಬಂದಿದ್ದಾಗ. ಭಾರತದ ಬೇರೆ ಬೇರೆ ರಾಜ್ಯಗಳಿಂದ ಅಲ್ಲಿಗೆ ಬಂದಿದ್ದರು. ನೀಳ ಮೂಗು, ಉದ್ದನೆಯ ಕೋಲು ಮುಖ, ಗುಲಾಬಿ ಬಿಳುಪು ಬಣ್ಣದ ಈ ಹುಡುಗನಿಗೆ ಬೆಂಗಳೂರಿನ ಹುಡುಗಿ ಪುನ ಸೋಲುವುದು. ಇಲ್ಲಿ ಪ್ರಮುಖ ವಿಷಯ ಆತನ ಪೂರ್ಣ ಹೆಸರು ಗ್ಯಾಟ್ ಮೂಲಕ ವ್ಯಾಗ್ಯಾಲ್ ಎಂದಿದ್ದ ಕಾಶ್ಮೀರಿ ಪಂಡಿತರು.

ಇಲ್ಲಿ ಪ್ರಮುಖವಾಗಿ ಕಾಶ್ಮೀರದ ಉಡುಗೆ-ತೊಡುಗೆಗಳನ್ನು ಅವರ ಪೀಳಿಗೆಯ ಬಗ್ಗೆ ಅವರ ಆಚಾರ-ವಿಚಾರಗಳ ಬಗೆಗೆ ಸಂಸ್ಕೃತಿಯ ವಿಷಯಗಳ ಬಗ್ಗೆ ತುಂಬಾ ಮನೋಜ್ಞವಾಗಿ ಕತೆಗಾರ್ತಿ ಬರೆದಿದ್ದಾರೆ.

"ಒಂದು ವಾರದಲ್ಲಿ ಎದೆಯಲ್ಲಿ ಗೂಡುಕಟ್ಟಿ ಬೀಡುಬಿಟ್ಟ ಈ ಹುಡುಗ. ಅದಕ್ಕೆ ನೂರು ಕಾರಣಗಳಿದ್ದವು. ತತ್ಕ್ಷಣದ ತುಡಿತ, ತಳಮಳ, ಚಡಪಡಿಕೆ, ಏನೊಂದೂ ಕಾಣದ ಸದಾ ನಿಷ್ಕಳಂಖ ಮುಗುಳ್ನಗೆಯ ಶಾಂತ ಮನಸ್ಸಿನ ಈ ಹುಡುಗ

ಅಲ್ಲಿದ್ದವರೆಲ್ಲರಿಗಿಂತಲೂ ಬೇರೆಯಾಗಿದ್ದ. ಭಿನ್ನವಾಗಿ ಕಂಡಿದ್ದ. ಯಾವುದಕ್ಕೂ ಆತುರವಿಲ್ಲ, ಅವಸರವಿಲ್ಲ. ಮುನ್ನುಗ್ಗುವನಲ್ಲ, ಎಲ್ಲರ ನಡುವೆ ತಾನು ಎದ್ದು ಕಾಣಬೇಕೆಂಬ ಮಹಾದಾಸೆಯಿಲ್ಲ. ಪಾಂಡಿತ್ಯ ಪ್ರದರ್ಶನಕ್ಕೆಂದೇ ಪ್ರಶ್ನೆಗಳನ್ನು ಕೇಳಿ ಎಲ್ಲರ ಗಮನವನ್ನು ತನ್ನತ್ತ ಸೆಳೆದವನಲ್ಲ. ಅತ್ಯಂತ ಸರಳವಾಗಿ ಸಹಜವಾಗಿ ಹಿನ್ನೆಲೆಯಲ್ಲಿ ಬೆರೆತು ಹೋಗಿ ಪರಿಸರ-ದಲ್ಲೊಂದಾಗುವ ಅವನ ಪರಿಯೇ ಬೇರೆ ಇತ್ತು"[೧]

ಕತೆಗಾರ್ತಿ ಇಲ್ಲಿ ಮುಗ್ಧ ಮನಸ್ಸಿನ ಮೃದುಸ್ವಭಾವದ ಹಳ್ಳಿಯ ಲೇ. ಹುಡುಗನನ್ನು ಗುಣಗಾನ ಮಾಡಿರುವುದು ಹೆಮ್ಮೆಯ ಸಂಗತಿ. ಈ ದಿಸೆಯಲ್ಲಿ ಲೇದಾಡಿ ವ್ಯಕ್ತಿಗಳ ವ್ಯಕ್ತಿತ್ವದ ನಿಲುಮೆಗಳನ್ನು ಹಿಮಾಂಕನ ಪಾತ್ರದಲ್ಲಿ ತೋರಿಸಿದ್ದಾರೆ. ಯಾವುದೇ ತರಹದ ಅವಸರ, ಆತುರ, ತಳಮಳ, ಚಡಪಡಿಕೆ ಇಲ್ಲದ ವ್ಯಕ್ತಿ ಬೆಂಗಳೂರಿನ ಹುಡುಗಿ ಪ್ರೀತಿಸುವಂತದ್ದು. ಇಲ್ಲಿ ಮೆಚ್ಚುವಂತದ್ದು. ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದ ಈಕೆಗೆ ಹಿಮಾಂಕನನ್ನು ನೋಡಬಯಸಿದ್ದಳು. ಅವನ ಹಿನ್ನೆಲೆಯಲ್ಲಿ ಅವನ ಪರಿಸರದಲ್ಲಿ, ಅವನ ಬದುಕಿನ ಭಾಗವಾಗುವ ಭವಿಷ್ಯದ ಕನಸಿನಲ್ಲಿ ಹಿಮಾಂಕನನ್ನು ನೋಡಬಯಸಿದ್ದಲು. ಹಿಮದ ಕಾಲದಲ್ಲಿ.

ಲೇ ನಲ್ಲಿ ಮರದ ಕಿಟಕಿಗಳು, ಮಣ್ಣಿನ ಮನೆಗಳು, ಇಲ್ಲಿ ಲೇ ಗೆ ಬಂದ ಬೆಂಗಳೂರಿನ ಹುಡುಗಿಯ ಬಗ್ಗೆ ಅಪಾರವಾದ ಕಾಳಜಿಯನ್ನು ಹೊಂದಿದ್ದ, ಚಪಾತಿ, ಅಲೂಗೆಡ್ಡೆ ಪಲ್ಯ ಕೊಟ್ಟಿದ್ದ.

"ನನ್ನನ್ನು ಹೊರಗೆ ಅಲೆದಾಡಿಸಿದ. ತಣ್ಣನೆಯ ಕಣಿವೆಯಲಿ ಶೀತಲ ಸೂರ್ಯ, ಬಿಸಿ ಇಲ್ಲದ ಶಾಖ ಮರೆತ ನಿಶ್ಶಕ್ತ ಸೂರ್ಯ, ಆದರೆ ಕಣ್ಣು ಕುಕ್ಕುವಂತೆ ಪ್ರಖರ ಬೆಳಕು. ನನ್ನೊಳಗಿನ ಪ್ರಶ್ನೆಗಳು ನನ್ನೊಳಗಿನ ನಿರ್ಧಾರಗಳು ವಾಸ್ತವದ ಥಂಡಿಯಲ್ಲಿ ಹಿಮಗಟ್ಟಿದಂತೆ, ಮರುಕ್ಷಣ ಬುಖಾರೆಯ ಬಿಸಿಗಿಟ್ಟು ಕರಗಿದಂತೆ, ಮನಸ್ಸು, ಹೋಲಾಯಮಾನ".[೨]

ಇಲ್ಲಿ ಅವಳ ವ್ಯಕ್ತಿತ್ವವನ್ನು ತೋರಿಸುವಂತದ್ದು. ಹಿಮಾಂಸನ ಜೊತೆ ಕೊನೆಯತನಕ ಇರಲು ಬಂದವಳು ಮನಸ್ಸು ಬದಲಾಯಿಸಿದ್ದು. ಇಲ್ಲಿ ಸ್ತ್ರೀಯಾಗಿ ಅವಳು ಯೋಚಿಸುವ ರೀತಿ ಇಲ್ಲಿ ಮುಖ್ಯ.

---

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೪೫.
೨. ಅದೇ, ಪು. ೫೭.

ಲೇಗಿ ಬಂದು ಹತ್ತು ದಿನವಾಗಿತ್ತು. ತರ್ಕಾ ಬಿಚ್ಚಿ ನಡೆಯುವ ಧೈರ್ಯವಾಗಿರದಿದ್ದರೂ, ಕೈಕಾಲು ಬೆರಳೆಲ್ಲಾ ಮರಗಟ್ಟಬಿದ್ದುಹೋಗುವ ಹೆದರಿಕೆ ಭಯವಿರಲಿಲ್ಲ. ಇಲ್ಲಿಯ ಚಳಿಗೂ ಮೈಹೊಂದಿಕೊಂಡಿತ್ತು. ಆದರೆ ಮನಸ್ಸು ಮಾತ್ರ ಬೆಂಗಳೂರಿನ ಕಡೆಗೆ ಮುಖಮಾಡಿತ್ತು. ಸುತ್ತಲ ಬೆಟ್ಟಗುಡಗಳಲ್ಲಿ ಅಲೆದ ರಮ್ಯ ಸಂಜೆಗಳು, ಹಿಮದ ಬೆಟ್ಟಗಳಲ್ಲಿ ತಿರುಗುವ ಮಾನಗಳಲ್ಲಿ ವೆಚ್ಚದ ತುದಿಯ ಆಕರ್ಷಣೆಗಳು ಅಮೋಘ.

ಕತ್ತಲ ಗುಹೆಗಳು, ಗೂಂಡಾಗಳು, ಬುದ್ಧನ ಭವ್ಯಮೂರ್ತಿಗಳು, ಮೈತ್ರೇಯಿ ಬುದ್ಧ, ಹತ್ತು ತಲೆಗಳ ಸಹಸ್ರ ಕೈಗಳ ಅವಲೋಕಿಡೇಶ್ವರ, ಬುದ್ಧನ ರೂಪಗಳಾಗಿದ್ದವು. ಸಿಂಧೂನದಿ ಮುಂತಾದವುಗಳ ಲೇ.ನ ಸುಂದರ ಪರಿಸರದ ಸಾಂಸ್ಕೃತಿಕ ಪರಂಪರೆಗಳಾಗಿದ್ದವು. ಯಾವುದು ವಾಸ್ತವತೆ, ಏನುಬೇಕು ಮನಸ್ಸಿಗೆ ಹೃದಯಕ್ಕೆ, ಏಕೋ ಕೆಳಕಂಡ ಕಸಿವಿಸಿ ಶುರುವಾಯಿತು. ಬಲುಪ್ರಯಾಸದಿಂದ ಹೇಳಿದಳು 'ಹಿಮಾಂಕ್ ನಾನು ಹೊರಡಬೇಕು'.

"ರಾತ್ರಿಯಿಡಿ ಕನಸಿನ ನಡುವೆ, ದೇಹ ಆತ್ಮದ ನಡುವೆ ನೂರು ಬಯಕೆಯ ನಡುವೆ ಜೀವ ಚಡಪಡಿಸಿತು. ಹಿಮಾಲಕ್, ನಿನ್ನಲ್ಲಿ ಕೊರತೆಗಳಿಲ್ಲ, ನನ್ನ ಪ್ರೀತಿಗೆ ಮಿತಿ ಇರಬಹುದು. ನಿನ್ನ ನೆಲದಲ್ಲಿ ನೆನ್ನೆಗಳಿವೆ, ನೆನಪುಗಳಿವೆ, ನನ್ನ ನಾಳೆಗಳು ಇಲ್ಲಿಲ್ಲ. ಬಿಸಿಲ ನೆಲದಲ್ಲಿ ಚಿಗುರೊಡೆದ ಪ್ರೀತಿ, ತಣ್ಣನೆಯ ಕಣಿವೆಯಲ್ಲಿ ಕರಗಿತ್ತು"[೧]

ಪ್ರೀತಿಯನ್ನು ಹಿಮಾಂಕನನ್ನು ಅರಸಿ ಬಂದವಳು ಇಲ್ಲಿಗೆ ಒಗ್ಗದೆ ತಣ್ಣನೆಯ ಕಣಿವೆಯಲ್ಲಿ ಹಿಮಾಂಕ್‌ನನ್ನು ಆ ನೆಲಕ್ಕೆ ಒಪ್ಪಿಸಿ ಹೋಗುವಂತದ್ದು ಮತ್ತು ಪ್ರೀತಿಯನ್ನು ಆ ಚಿತ್ರಗಳ ನಡುವೆ ಬಿಟ್ಟುಹೋಗಿದ್ದಳು.

**'ನೀನಿರುವೆ ನಮ್ಮೊಡನೆ ಕತೆ'**ಯಲ್ಲಿನ ಚರಿತ ತನ್ನ ಗಂಡನಾದ ರವಿಗೆ ಬರೆದ ಪತ್ರದೋಪಾದಿಯಲ್ಲಿ ಕತೆ ಮೂಡಿಬಂದಿದೆ. ಚಿಕ್ಕ, ಚೊಕ್ಕ ಕುಟುಂಬದಲ್ಲಿರುವಾಗ ಇದ್ದಕ್ಕಿದ್ದಂತೆ ರವಿಗೆ ಬ್ರೈನ್‌ಟ್ಯೂಮರ್ ಆಗಿ ಅನೇಕ ಆಪರೇಷನ್‌ಗೆ ಒಳಗಾಗುತ್ತಾನೆ. ಅಂಥ ಸಂದರ್ಭದಲ್ಲಿ ಎದೆಗುಂದದೆ ಗಂಡನಿಗೆ ಧೈರ್ಯ ಹೇಳಿ ಯುದ್ಧಕ್ಕೆ ಸಜ್ಜಾಗಿ ನಿಂತಂತೆ ನಿಲ್ಲುತ್ತಾಳೆ. ಆಪರೇಷನ್ ಆದರೂ ಅವನು ನರಳುವುದು ತಪ್ಪುವುದಿಲ್ಲ. ಜೊತೆಗೆ ಕೀಮೋತೆರಪಿಯಿಂದ ಗಡ್ಡೆ ಕುಗ್ಗುತ್ತದೆ ಎಂದಿದ್ದರೂ ಗಡ್ಡೆ ಕರಗುವುದಿಲ್ಲ ಎಂಬ ಸತ್ಯ ಗೊತ್ತಾದಾಗ ರವಿಯನ್ನು ಮನೆಗೆ ಕರೆದೊಯ್ಯುತ್ತಾಳೆ. ರವಿಗೆ "ನೋವು

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೫೭.

ಕೊಡದಿರು ದೇವರೇ ನೀ ಎಣಿಸಿಟ್ಟ ಕ್ಷಣಗಳನ್ನೇ ನೆಮ್ಮದಿಯಿಮದ ಕಳೆಯಲು ಬಿಡು" ಎಂದು ಪ್ರಾರ್ಥಿಸುತ್ತಾಳೆ. ತನಗೇ ಏಕೆ ಈ ಕಷ್ಟ ಎಂದು ಯೋಚನೆ ಬಂದರೂ ಮಗಳಿಗಾಗಿ ತನಗಾಗಿ ಬದುಕು ಕಟ್ಟಿಕೊಳ್ಳಲು ಯತ್ನಿಸುತ್ತಾಳೆ. ಗಂಡ ಬದುಕಿರುವಾಗಲೇ ತಾನೊಂದು ನೆಲೆ, ಬದುಕು ಕಟ್ಟಿಕೊಳ್ಳುತ್ತಾಳೆ. ಈ ಕತೆಯಲ್ಲಿನ ವರ್ಣನೆ ಸುದೀರ್ಘ ಎನಿಸಿದರೂ ಒಬ್ಬ ಪ್ರೇಮಿ, ಉತ್ಕಟಾಕಾಂಕ್ಷಿ ತನ್ನ ಪ್ರೇಮಿಯನ್ನು ನೆನೆದು ಅಭಿವ್ಯಕ್ತಿಸಿದ ಆತ್ಮೀಯ ಪತ್ರದಮತಿದೆ. ಗಂಡನ ಪ್ರೀತಿಯ ವರ್ತುಲದಲ್ಲೇ ಮಗಳು, ತಾನು ಬಾಳುವ ಪಣತೊಡುತ್ತಾರೆ.

**'ನೆನಪಿನಂಗಳದಲ್ಲಿ ನೂರುಚಿತ್ತಾರ ಕತೆ'**ಯಲ್ಲಿ ಮಗಳು ಬೇಬಿ ಪ್ರೇಮಪಾಶಕ್ಕೆ ಸಿಲುಕಿ ಮನುವಿನ ನಿರಾಕರಣೆಯಿಂದ ಕಂಗೆಟ್ಟು ನಿಂತಿದ್ದಾಗ ತಾಯಿ ಪ್ರಬುದ್ಧೆ ಕ್ರಿಯಾಶೀಲಳಾದವಳು, ಮಗಳಿಗೆ ಸ್ನೇಹಿತೆಯಂತೆ ವರ್ತಿಸುತ್ತಾಳೆ. "ನನ್ನಜ್ಜಿ ನನ್ನಮ್ಮನ ಒಳದನಿಗಳು ನನ್ನ ತಲುಪಲೇ ಇಲ್ಲ ಬೇಬಿ. ಆದರೆ ನನ್ನ - ನಿನ್ನ ನಡುವೆ ಈ ಪರಂಪರೆಯ ಪರದೆ ಏಕೆ? ಹೆಣ್ಣು-ಹೆಣ್ಣಿನ ಅನುಭವಗಳ ಸರಮಾಲೆಯ ಅನಂತ ಎಳೆಯ ಕೊಂಡಿಯಾಗೋಣ, ಬಾ ಹಂಚಿಕೊಳ್ಳೋಣ"[೧] ಎಂದು ಮಗಳನ್ನು ತನ್ನ ಗತಕಾಲದ ಬಾಲ್ಯಕ್ಕೆ ಕೊಂಡೊಯ್ಯುತ್ತಾಳೆ. ತನ್ನ ಹಳೆಯ ಪ್ರೇಮಿಗಳನ್ನು ಪರಿಚಯಿಸುತ್ತಾ, ಬದುಕು ಹೇಗೆ ನಿಂತ ನೀರಾಗದೆ ಹರಿಯುತ್ತಿದೆ ಎಂಬ ಪರಿಚಯ ಮಾಡಿಸುತ್ತಾಳೆ. ಆ ಮೂಲಕ ಅಳುತ್ತಾ, ಖಿನ್ನತೆಗೆ ಒಳಗಾದ ಮಗಳು ಬದಲಾಗುವಲ್ಲಿ ಸಹಕಾರಿಯಾಗುತ್ತಾಳೆ. ಮಕ್ಕಳನ್ನು ದಂಡಿಸದೆ ಅವರ ಸಮವಾಗಿ ನಿಂತು ನೀವುಪಡುತ್ತಿರುವ ದುಃಖ ನನ್ನದೂ, ಅದರಿಂದ ಹೊರ ಬಾ, ಸಮಯವಿದೆ ಹೊರ ಬಾ ಎಂದು ಮಗಳನ್ನು ಹುರಿದುಂಬಿಸುತ್ತಾಳೆ.

**'ಬದುಕು ನಿನ್ನಲೆಂಥಾ ಮುನಿಸು'** ಕತೆಯಲ್ಲಿನ ಶಶಿಗೆ ಇದ್ದಕ್ಕಿದ್ದಂತೆ ಸ್ತನ ಕ್ಯಾನ್ಸರ್ ಬಂದಾಗ ತಾನು ಬದುಕುವುದೇ ಬೇಡಾ ಅಂದುಕೊಳ್ಳುತ್ತಾಳೆ. ಅಪರೇಷನ್ ಮಾಡಿದ ಮೇಲೆ ತನ್ನ ದೇಹವನ್ನು ಕಂಡು ಗಂಡ ಅಸಹ್ಯಿಸಬಹುದು, ಬಿಟ್ಟು ತೆರಳಬಹುದು ಎಂದುಕೊಂಡಿರುತ್ತಾಳೆ. ಆದರೆ ರಮೇಶ ಅವಳನ್ನು ಹೆಜ್ಜೆಹೆಜ್ಜೆಗೂ ಗಮನಿಸಿ ಅವಳು ಚೇತರಿಸಿಕೊಳ್ಳುವಂತೆ ಮಾಡುತ್ತಾನೆ. ಗಂಡ ತನ್ನ ಚಿಕಿತ್ಸೆಗಾಗಿ ಕಷ್ಟಪಡುವುದನ್ನು ಕಂಡು ಗೆಳತಿ ರೇಖಾ ಬಳಿ ಹೋಗಿ ಈ ಹಿಂದೆ ಕ್ಯಾನ್ಸರ್ ಬಗ್ಗೆ ಒಂದು ಲೇಖನ ಕೇಳಿದ್ದೆಯಲ್ಲಾ, ಬೇಕಿತ್ತಾ' ಎಂದು ಕೇಳಿ ಬರವಣಿಗೆ ಪ್ರಾರಂಭಿಸಿದಳು.

---

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೧೨೧.

ಆರೇಳು ಜನರನ್ನು ಭೇಟಿ ಮಾಡಿ ಮಾಹಿತಿಯನ್ನು ಕಲೆಹಾಕುತ್ತಾಳೆ. ಲೇಖನ ಮುಗಿಸಿ ಪೋಸ್ಟ್ ಮಾಡುತ್ತಾಳೆ. ಅವಳು ಬರೆದ ಲೇಖನಗಳು ಪತ್ರಿಕೆಯಲ್ಲಿ ಪ್ರಕಟವಾಗುತ್ತವೆ. ಅವಳ ಹಂಚಿಕೊಳ್ಳುವ ಕಲೆಯಿಂದ ಲೇಖನ ಜನಪ್ರಿಯವಾಗುತ್ತದೆ. ಆಗ ಶಶಿ ಗಂಡ ರಮೇಶನಲ್ಲಿ ತನ್ನ ಅನಿಸಿಕೆಯನ್ನು ಹೀಗೆ ಹಂಚಿಕೊಳ್ಳುತ್ತಾಳೆ. "ನಮ್ಮೊಳಗೇ ನಮ್ಮೊಳಗಿನ ಎಷ್ಟೊಂದು ಆಯಾಮಗಳಿಗೆ ಅಗಳಿ ಹಾಕಿ ಬೀಗ ಜಡಿದು ಹೊರಬರುವ ಅವಕಾಶವೇ ನೀಡದೇ ಬದುಕು ಕಳೆದುಬಿಡುತ್ತೇವೆ. ನನಗೇ ನಾನು ಅಪರಿಚಿತಳಾಗಿದ್ದೇ"[೧] ಎನ್ನುವ ಮಾತಿನಲ್ಲಿ ಎಷ್ಟೊಂದು ಅರ್ಥ ಅಡಗಿದೆ. ಎಷ್ಟೋ ಹೆಣ್ಣು ಮಕ್ಕಳಿಗೆ ತಮ್ಮ ಶಕ್ತಿ, ಸಾಮರ್ಥ್ಯದ ಅರಿವೇ ಇರುವುದಿಲ್ಲ. ಮನಸ್ಸಿಟ್ಟು ತೊಡಗಿಸಿಕೊಂಡರೆ ಯಾವುದೇ ಕಾರ್ಯವನ್ನು ಮಾಡಬಹುದು ಎಂಬುದಕ್ಕೆ ಶಶಿ ಮಾದರಿಯಾಗಿ ನಿಲ್ಲುತ್ತಾಳೆ. ಲೇಖನಕ್ಕೆ ಬಂದ ನೂರೈವತ್ತು ರೂಪಾಯಿಗಳು ಅವಳ ಆತ್ಮಸ್ಥೈರ್ಯವನ್ನು ಹೆಚ್ಚಿಸುತ್ತವೆ.

**ಮತ್ತೆ ಬರೆವ ಕವನಗಳು ಕತೆಯಲ್ಲಿನ** ಡಾ॥ ಅನು ಕಾನ್‌ಫೆರೆನ್ಸ್‌ನಲ್ಲಿ ಪ್ರಬಂಧ ಮಾಡಲು ಶ್ರೀನಗರಕ್ಕೆ ತೆರಳಿರುತ್ತಾಳೆ. ಅಲ್ಲಿ ಈ ಹಿಂದೆ ಅವಳು ಕವನ ಬರೆಯುತ್ತಿದ್ದಾಗಿನ ಅಭಿಮಾನಿ ಅಜಯ್ ಭೇಟಿಯಾಗುತ್ತಾನೆ. ಅವಳು ಈ ಹಿಂದೆ ಕವನ ಏಕೆ ಬರೆಯುತ್ತಿಲ್ಲ ಎಂದು ವಿಚಾರಿಸುತ್ತಾನೆ. ಬರಿಯ ಕಂಪನಿ, ತಂತ್ರಜ್ಞಾನವಷ್ಟೇ ಅಲ್ಲದೇ ಪ್ರವೃತ್ತಿಯಿಂದ ಕವಯತ್ರಿಯೂ ಆಗಿರುವ ಡಾ॥ ಅನು ತನ್ನ ಹಿಂದಿನ ಹವ್ಯಾಸಗಳ ಬಗ್ಗೆ ಮೆಲುಕುಹಾಕುತ್ತಾಳೆ. ಬಾಲ್ಯದಲ್ಲಿ ತಾನು ಎದುರಿಸಿದ ಅನೇಕ ನಿರ್ಬಂಧಗಳನ್ನು ತಾನು ಮೆಟ್ಟಿ ನಿಂತು ಬಿಟ್ಟಿರುವ ಬಗ್ಗೆ ಅವಳಿಗೆ ಆಶ್ಚರ್ಯವಾಗುತ್ತವೆ.

**ಕಪ್ಪುಮೋಡ ಬೆಳ್ಳಿ ಅಂಚು ಕತೆಯಲ್ಲಿನ** ಮಧು ಗಂಡನ ಅಲಕ್ಷಕ್ಕೆ ಗುರಿಯಾಗಿ ನೋವನ್ನು ಅನುಭವಿಸುತ್ತಾ ಇರುತ್ತಾಳೆ. ಅವಳ ಗೆಳತಿ ಶೀಲಾ ನರ್ಸ್ ಆಗಿದ್ದವಳು ಮಧುವಿನ ಸ್ವಾವಲಂಬನೆಯ ಹಾದಿಗೆ ಟೈಪಿಂಗ್, ಬೇಬಿಸಿಟ್ಟಿಂಗ್, ಪ್ಲಾಂಟ್ ನರ್ಸರಿ...... ಹೀಗೆ ಹತ್ತು ಹಲವು ದಾರಿ ಹುಡುಕಿ ಅವಳು ಒಬ್ಬ ಫ್ಯಾಷನ್ ಡಿಸೈನರ್ ಆಗಲು ಕಾರಣಳಾಗುತ್ತಾಳೆ. ಸ್ವತಃ ತಾನೇ ಮಧು ಹೊಲೆದ ಡ್ರೆಸ್‌ಗಳನ್ನು ಧರಿಸಿ ಮಧುವಿಗೆ ಆರ್ಡರ್‌ಗಳು ಬರುವಂತೆ ಮಾಡುತ್ತಾಳೆ. ಅವರಿಂದ ಮಧು ತನ್ನ ಮಗಳು ಪುಟ್ಟಿಗೆ ಒಂದು ಸಿಂಡ್ರೆಲ್ಲಾ ಫ್ರಾಕ್ ಹೊಲೆಯಲು ಬಿದ್ದ ಖರ್ಚು ನೂರಹತ್ತು ರೂಪಾಯಿ, ಅದೇ

---

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೧೪೫.

ಅಂಗಡಿಯಲ್ಲಾದರೆ ಮುನ್ನೂರಹತ್ತುರೂಪಾಯಿ, ಎಷ್ಟು ಉಳಿತಾಯವಾಗುತ್ತಿವೆ ಎಂಬುದನ್ನು ಅರಿತುಕೊಮಡ ಮಧು ಅಂದುಕೊಳ್ಳುವುದು 'ನನ್ನ ಬೆರಳ ತುದಿಯಲ್ಲಿ ಎಂಥಾ ಪ್ರತಿಭೆ ಇವೆ. ಅದನ್ನೇಕೆ ಕಟ್ಟಿಹಾಕಿ ಕೂಡಿಹಾಕಿರುವೇ? ನಾನು ಬರೀ ಸೀರೆ ಅಂಚು, ಫಾಲ್ಸ್ ಹೊಲಿಯೋ ಹೆಂಗಸಲ್ಲ, ನಾನು ಡಿಸೈನ್ ಮಾಡಬಲ್ಲೆ"........ ನನ್ನ ಬದುಕನ್ನೂ.[೧] ಹೀಗಾಗಿ ತನಗೆ ಬರುವ ಹಣದಿಂದ ಪುಟ್ಟಿಯ ಭವಿಷ್ಯವನ್ನು ಕೊಡಬಲ್ಲುದು, ನಾಳೆಗಳ ಸುಂದರ ಬದುಕನ್ನು, ಕಳೆದುಹೋದ ಆತ್ಮವಿಶ್ವಾಸವನ್ನು ಈ ಕುಶಲ ಕಲೆ ತಂದುಕೊಟ್ಟಿರುವುದರ ಬಗ್ಗೆ ಅವಳಿಗೆ ಹೆಮ್ಮೆಯಿದೆ.

ನೇಮಿಚಂದ್ರರವರ **'ನಮ್ಮ ಕನಸುಗಳಲ್ಲಿ ನೀವಿದ್ದಿರಿ'** ಕತೆಯಲ್ಲಿನ ಕಾವ್ಯ ಹೊಸಕನಸುಗಳನ್ನು ಕಟ್ಟಿಕೊಂಡು ಕಿರಣ್ ಜೊತೆ ಹೊರಡುತ್ತಾಳೆ. ಅತಿಯಾದ ಕನಸುಗಾರಿಕೆಯಿಂದ ಬಂದವಳಿಗೆ ಅವನೊಟ್ಟಿಗೆ ಸಂಬಂಧವೇರ್ಪಡಿಸಿಕೊಳ್ಳಲು ಆಗದೇ ಮತ್ತೆ ಮಗಳು ಬಿಂಬ, ಗಂಡ ಸುಂದರನ ಬಳಿ ಬರುತ್ತಾಳೆ. ತಾನು ಮಾಡಿದ್ದು ಒಂದು ಪ್ರಯೋಗ ಎನ್ನುತ್ತಾಳೆ. "ಸಾಂಗತ್ಯವಿಲ್ಲದ ನಿರ್ವಾತದಲ್ಲಿ ಉಸಿರುಬಿಗಿಯುತ್ತದೆ. ಒಂದು ಅವಧಿಯ ಬಳಿಕ, ಒಂದು ಮಿತಿಯ ಬಳಿಕ, ಮೌನಹಿಂಸೆಯಾಗುತ್ತದೆ, ಅಸಹ್ಯವಾಗುತ್ತದೆ.[೨] ಎಂದು ಗಂಡನೊಟ್ಟಿಗೆ ತಾನೇಕೆ ದೂರವಾಗಬೇಕಾಯ್ತು ಎಂಬ ವಿವರಣೆ ನೀಡುತ್ತಾಳೆ.

"ನನಗೆ ಈ ತೂಕಡಿಸುವ ಬದುಕನ್ನು ಒಮ್ಮೆ ಕೆಡವಿ ಏಳಬೇಕಿತ್ತು, ತಣ್ಣಗೆ ಕೊರೆಯುತತಾ ತಿಮಿರವಾಗುತ್ತಿದ್ದ ರಾತ್ರಿಗಳಿಗೆ ಉದ್ವೇಗದ ಶಾಖ ತುಂಬಬೇಕಿತ್ತು"[೩] ಎಂದು ಸಮರ್ಥಿಸಿಕೊಳ್ಳುತ್ತಾ 'ವಯಸ್ಸಾಯ್ತು, ಮದುವೆ ಮಕ್ಕಳು ಎಲ್ಲ ಆಯ್ತು. ಇನ್ನೇನುಬೇಕು' ಎಂಬ ಅಭಾವ ವೈರಾಗ್ಯದ ಮಾತು. ಅಂತಹವರು ಮೂವತ್ತಕ್ಕೆ ಮುಪ್ಪಾಗುವುದಷ್ಟೇ ಅಲ್ಲ, ಗೋರಿಯಾಗುತ್ತಾರೆ. ಇಲ್ಲ ಇದೆಲ್ಲ ಒದರಿ ಭಂಡಧೈರ್ಯವಿದ್ದವರು ಮತ್ತೊಂದು ಪ್ರಣವಯಾತ್ರೆಗೆ ಕೈಹಾಕುತ್ತಾರೆ"[೪] ಎಂದು ಗಂಡನಿಗೆ ತಾನೇಕ ಮನೆಬಿಟ್ಟು ಹೋಗಬೇಕಾಯ್ತು ಎಂದು ವಿವರಿಸುತ್ತಾಳೆ. ತಾನು ಮಾಡಿದ ಕೃತ್ಯದಿಂದ ತನಗೇನು ಅಂಥ ನೋವಿಲ್ಲದೇ ಕಿರಣ್‌ನನ್ನು ತಾನು ಬಲಿಪಶು ಮಾಡಿದ್ದಕ್ಕೆ ವ್ಯಥೆಪಟ್ಟುಕೊಳ್ಳುತ್ತಾಳೆ. ಇದ್ದ ವ್ಯವಸ್ಥೆ ಸರಿ ಇಲ್ಲ ಎಂದಾಗ ಸರಿ ತನ್ನ

---

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರವರ ಕತೆಗಳು, ಪು. ೨೩೭.
೨. ಅದೇ, ಪು. ೩೦೯.
೩. ಅದೇ, ಪು. ೩೧೨.
೪. ಅದೇ.,

ಜೀವನ ಸರಿಪಡಿಸಿಕೊಳ್ಳಲು ಅವಳು ಕೈಗೊಳ್ಳುವ ನಿರ್ಣಯ ಮಾತ್ರ ಅಪರೂಪದ, ಧೈರ್ಯಮಯ ಸಾಹಸ.

ಒಟ್ಟಾರೆ ಈ ಅಧ್ಯಾಯದಲ್ಲಿ ಕ್ರಿಯಾಶೀಲ ಮನೋಭಾವದ ಮಹಿಳೆಯರು ಬಹುಪಾಲು, ವಿದ್ಯಾವಂತರು, ಆರ್ಥಿಕ ಪ್ರಗತಿಗೆ ಪೂರಕವಾಗಿ ನಿಲ್ಲಬಲ್ಲಂತಹವರು. ಗಂಡ ಕೈಬಿಟ್ಟ ಸಂದರ್ಭದಲ್ಲಿ ತಮ್ಮ ಮುಂದಿನ ಹಾದಿಯನ್ನು ತಾವೇ ನಿರ್ಮಿಸಿಕೊಳ್ಳುವತ್ತ ಸಬಲರಾಗಿ, ಸಶಕ್ತರಾಗಿ ರೂಪುಗೊಳ್ಳುವುದನ್ನು ಇಲ್ಲಿ ಗುರುತಿಸಿದ್ದೇನೆ.

# ಅಧ್ಯಾಯ – ೫

# ನೇಮಿಚಂದ್ರರ ಕತೆಗಳ ಒಟ್ಟು ವಿವೇಚನೆ

ಮಾಹಿತಿ ತಂತ್ರಜ್ಞಾನ ಯುಗದಲ್ಲಿ ಮಹಿಳೆ ಪ್ರತಿಯೊಂದು ಕ್ಷೇತ್ರದಲ್ಲಿಯೂ ಮುಂದಿದ್ದಾಳೆ. ಪ್ರಮುಖವಾಗಿ ತಂತ್ರಜ್ಞಾನ, ಬಾಹ್ಯಾಕಾಶ, ಸೇನಾಪಡೆ, ರಾಜಕೀಯ, ವೈದ್ಯಕೀಯ ಕ್ಷೇತ್ರ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ, ವೇದಗಳ ಕಾಲದಿಂದಲೂ ಮಹಿಳೆ ತನ್ನದೇ ಆದಂತಹ ಛಾಪನ್ನು ಮೂಡಿಸಿದ್ದಾಳೆ. ಉದಾಹರಣೆಗೆ ಗಾರ್ಗಿ, ಮೈತ್ರೇಯಿ. ಈ ದಿಸೆಯಲ್ಲಿ ನೋಡಿದಾಗ ಸಾಹಿತ್ಯ ಕ್ಷೇತ್ರದಲ್ಲಿಯೂ ಮಹಿಳೆ ಅಮೋಘವಾದ ಅನಂತವಾದ, ಚಿರಂತನವಾದ ಕೊಡುಗೆಗಳನ್ನು ಕೊಟ್ಟಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಸಣ್ಣಕತೆಗಳ ಬಗೆಗೆ ನೇಮಿಚಂದ್ರರವರು ತಮ್ಮದೇ ಆದಂತಹ ವಿಶಿಷ್ಟ ಬರವಣಿಗೆಯಿಂದ ಸಹೃದಯರ ಮನಗೆದ್ದಿದ್ದಾರೆ.

ಕೌಟುಂಬಿಕ ಸಮಸ್ಯೆಗಳ ಅನಾವರಣ ಕತೆಗಳಲ್ಲಿ ಮೂಡಿಬಂದಿದೆ. ಸಾಮಾಜಿಕ ವ್ಯವಸ್ಥೆಯ ಮೇಲೆ ಕುಟುಂಬ ಪ್ರೀತಿಯಿರುವುದರಿಂದ ಕುಟುಂಬದ ಆಗುಹೋಗುಗಳು ಮಕ್ಕಳ ಮೇಲೆ, ಹಿರಯರ ಮೇಲೆ ಬೀರುವಂತಹ ಪರಿಣಾಮದ ತೀವ್ರತೆ ಮುಂತಾದವುಗಳ ಬಗೆಗೆ ನೇಮಿಚಂದ್ರರವರ ಕತೆಯಲ್ಲಿ ಅನಾವರಣವಾಗುತ್ತದೆ.

ಅಸಮಾನತೆ, ಅಕ್ರಮಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸುತ್ತಾ ಪ್ರಾಚೀನ ಕೌಟುಂಬಿಕ ವ್ಯವಸ್ಥೆ, ಪ್ರಸ್ತುತ ಕೌಟುಂಬಿಕ ವ್ಯವಸ್ಥೆಗಳ ಸಾಂಸ್ಕೃತಿಕ ಆಚಾರ–ವಿಚಾರಗಳ ಪ್ರತಿರೂಪದ ಅನಾವರಣ ಕತೆಗಳಲ್ಲಿ ಅಭಿವ್ಯಕ್ತವಾಗುತ್ತ ಸಾಗುತ್ತದೆ.

ಅತ್ತೆ ಮಾವರಿಗಂಜಿ ಮತ್ತೆ ಮೈದುನರಿಗಂಜಿ
ಹತ್ತೀಲಿ ಆಳುವ ನೆರೆಗಂಜಿ। ಮಗಳ
ನೀನು ಅತ್ತೆ ಮನೆಯಲ್ಲಿ ಬಾಳಪ್ಪ.....[೧]

ಯಾವುದೇ ವಿಧವಾದ ಸ್ವತಂತ್ರ ಮಹಿಳೆಗೆ ಇರಲಿಲ್ಲ. ತಾಯ್ತನದ ಹಂಬಲ, ಗಂಡು ಹೆಣ್ಣಿನ ನಡುವೆ ಯಾವುದೇ ರೀತಿಯಲ್ಲಿ ಬೇಧವನ್ನು ಕಾಣಬಾರದು. ಸ್ತ್ರೀಯರ ಭಾವನೆಗಳು, ಅಭಿಪ್ರಾಯಗಳನ್ನು, ಅನುಭವ, ಸಾಧನೆಗಳನ್ನು ಕತೆಯಲ್ಲಿ ಅಭಿವ್ಯಕ್ತಿಸಿದ್ದಾರೆ.

---

೧. ಡಾ. ಡಿ. ಸುಮಂಗಳ–ಆಧುನಿಕ ಮಹಿಳಾ ಕಥಾಸಾಹಿತ್ಯದಲ್ಲಿ (ಸಣ್ಣಕತೆಗಳು) ಪ್ರತಿಭಟನೆಯ ಛಾಪುಗಳು, ಪು. ೧೯.

"ಆರ್ಥಿಕ ಮುಗ್ಗಟ್ಟಿನಲ್ಲಿ ಪ್ರತಿಕೂಲ ಪರಿಸ್ಥಿತಿಯನ್ನು ಎದುರಿಸಿ ಮೇರಿಕ್ಯೂರಿ 'ರೇಡಿಯಂ ಕಂಡು ಹಿಡಿದಳು' ರೇಡಿಯೋ ಆಕ್ಟಿವಿಟಿ ಎಂಬ ಹೊಚ್ಚಹೊಸ ರಂಗಕ್ಕೆ ಜನ್ಮಕೊಟ್ಟಳು, ಅಗಾದ ಹಣದ ಸಾಧ್ಯತೆ ಇದ್ದ 'ರೇಡಿಯಂ' ಅನ್ನು ಮೇರಿಕ್ಯೂರಿ ಪೇಟೆಂಟ್ ಮಾಡದೆ ಮಾಧವ ಸೇವೆಗೆ ಮೀಸಲೆಂದು ಅರ್ಪಿಸಿದಳು, ಪತ್ನಿಯ ಸಹೋದನೆಯ ಮಹತ್ವದ ಸಾಧ್ಯತೆಯ ಅರಿವಾದೊಡನೆ, ತನ್ನ ಸ್ವಂತ ಸಂಶೋಧನೆಯನ್ನು ತೊರೆದು ಪಿಯರ್‌ಕ್ಯೂರಿ ಆಕೆಗೆ ಜೊತೆಯಾಗಿದ್ದ. ಆ ಕ್ಷಣದಿಂದ ಅವರ ಜೊತೆ ಜೊತೆಯ ಸಂಶೋಧನೆಯ ದುಡಿಮೆಯಲ್ಲಿ ಯಾರು ಏನು ಮಾಡಿದರೆಂದು ಬೇರ್ಪಡಿಸಲಾರದಷ್ಟು ಐಕ್ಯತೆಯಿತ್ತು. ೧೯೦೩ರಲ್ಲಿ ಮೇರಿ ಮತ್ತು ಪಿಯರ್‌ಗೆ ಭೌತಶಾಸ್ತ್ರದ ನೊಬೆಲ್ ಪ್ರಶಸ್ತಿ ದೊರೆಯಿತು.[೧]

ಇಲ್ಲಿ ಪತಿ ಪತ್ನಿ ಜೊತೆಯಲ್ಲಿಯೇ ಸಂಶೋಧನೆ ನಡೆಸಿ ಯಶಸ್ವಿಯಾಗಿರು-ವಂತದ್ದು, ಪ್ರತಿಯೊಬ್ಬರಿಗೂ ಮಾದರಿಯಾಗಿ ನಿಲ್ಲುತ್ತದೆ. ಈ ನಿಟ್ಟಿನಲ್ಲಿ ಸ್ತ್ರೀಯಾದವಳು ಯಾವುದನ್ನು ಬೇಕಾದರೂ ಸಾಧಿಸಬಹುದು. ಅದಕ್ಕೆ ಸಮರ್ಪಣಾ ಭಾವ, ತಲ್ಲೀನತೆ, ಗುರಿ, ಉದ್ದೇಶಗಳು ಪರಿಶ್ರಮಗಳಷ್ಟೇ ಮುಖ್ಯ. ಈ ವಿಷಯದಲ್ಲಿ ನೇಮಿಚಂದ್ರರವರ ಕತೆಗಳು ಕ್ರಿಯಾಶೀಲ ಸ್ತ್ರೀಯರ ಬಗ್ಗೆ ಬೆಳಕನ್ನು ಚೆಲ್ಲುತ್ತದೆ.

ನಾಗರಿಕತೆಯ ಸೋಗಿನಲ್ಲಿ ಮಾನವೀಯ ಮೌಲ್ಯಗಳು ಕುಸಿಯುತ್ತಿವೆ. ಬದುಕುವ ಧೈರ್ಯ ಮೂಡಿಸಿ ಗಾಂಧಿಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸಬೇಕು ಮತ್ತು ಜೀವನದ ಕೌಟುಂಬಿಕ ಕ್ಷೇತ್ರಗಳ ಗಂಭೀರ ಸಮಸ್ಯೆಗಳು ಹಾಗೂ ಅನೇಕ ಸವಾಲುಗಳನ್ನು ಎದುರಿಸುವ ಧೈರ್ಯವನ್ನು ಮಾಡಿಕೊಳ್ಳುವುದರ ಜೊತೆಗೆ ಹೊಂದಾಣಿಕೆ ಬಗೆಗೆ ಅಭಿವ್ಯಕ್ತಿಸಿದ್ದಾರೆ ಕತೆಗಳಲ್ಲಿ.

ಜ್ಞಾನಕ್ಕಿಂತ ಮಿಗಿಲಾದುದು ಮತ್ತೊಂದಿಲ್ಲ. ಅದನ್ನು ಗಳಿಸಿದರೆ ಏನನ್ನಾದರೂ ಸಾಧಿಸಬಹುದು. ಸ್ಥಳವನ್ನು, ಜನರನ್ನು, ಕುಟುಂಬವನ್ನು, ಮಹಿಳೆಯರನ್ನು ಗೌರವದಿಂದ, ಪ್ರೀತಿಯಿಂದ ನೋಡಿಕೊಂಡಾಗ ಸುಂದರ ಬದುಕಿಗೆ ಅರ್ಥ ಬರುವುದರಲ್ಲಿ ಯಾವುದೇ ಸಂದೇಹವಿಲ್ಲ.

ಪರಿಣಾಮಕಾರಿ ಸಂವಹನ ವ್ಯಕ್ತಿ ವ್ಯಕ್ತಿಯ ನಡುವಿನ ಅನೇಕ ಅಂತರಗಳನ್ನು ತಪ್ಪು ಅಭಿಪ್ರಾಯಗಳನ್ನು ಸರಿಪಡಿಸಬಲ್ಲದು. ಹಿಂದಿನ ಯಾವ ಕಹಿ ಅನುಭವಗಳನ್ನು ಹಂಚಿಕೊಳ್ಳಲೂ ಹೋಗಬಾರದು.

---

೧. ನೇಮಿಚಂದ್ರ, ಮಹಿಳಾ ಅಧ್ಯಯನ, ಪುಟ ಸಂಖ್ಯೆ ೬೯.

ಎ.ಕೆ.ರಾಮಾನುಜನ್‌ರ ವಾಣಿಯಂತೆ ನಮ್ಮ ಅಹಂಕಾರವನ್ನು ನಾವೇ ದಾಟಬೇಕು. ಅವರ ಸ್ಪಷ್ಟ ಮಾತು ಪರಿಣಾಮಕಾರಿ ಸಂವಹನದ ಮೂಲಕ ನೆನಪಿರಲಿ ನೀವು ನಿಮ್ಮ ಜೀವನದುದ್ದಕ್ಕೂ ನಿಮ್ಮ ಜೊತೆ ಹೆಜ್ಜೆಯಿಡುವ ಜನರೊಡನೆ ಮತ್ತು ಕುಟುಂಬದ ಸದಸ್ಯರುಗಳೊಡನೆ. ಆದ್ದರಿಂದ ನಾವು ಮಾತಾಡುವ ಮಾತು ಸಿಹಿಯಿಂದ ಬೇರೆಯವರಿಗೆ ಹಿತವಾಗಿ ಕಾಣಿಸಬೇಕಾಗುತ್ತದೆ.

ಹಿರಿಯರ ಮಾತಿನಂತೆ ವಿವಾಹ ಒಡೆತನಕ್ಕಲ್ಲ. ಗೆಳೆತನಕ್ಕೆ ಹೊಂದಿಕೊಂಡು ಸುಂದರವಾಗಿ ಬದುಕಲು ಇಲ್ಲಿ ಯಾರಿಗೆ ಯಾರೂ ಒಡೆಯರಲ್ಲ. ಎಲ್ಲರಿಗೂ ಆ ಪರಮ ದಯಾನಿಧಿಯೇ ಒಡೆಯ! ಎಂಬ ಭಾವ ಮನದಲ್ಲಿದ್ದರೆ ಬಾಳು ಬಂಗಾರ ಬದುಕು ಪಾವನ.

"ಸಂಸಾರವೆಂಬುದೊಂದು ಗಾಳಿಯ ಸೊಡರು
ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯ"[೧]

ಮೂರು ಹೊತ್ತು ಸಂಸಾರ ತಾಪತ್ರಯಗಳಲ್ಲಿ ಅದಕ್ಕಾಗಿ ಹೇಗಾದರೂ ಮಾಡಿ ಸಂಗ್ರಹಿಸುವ ಗೀಳನ್ನು ಬೆಳೆಸಿಕೊಂಡು ಭಾವನೆಗಳಿಗೆ ಬೆಲೆ ಕೊಡುವುದನ್ನು ಮರೆತುಬಿಡುತ್ತೇವೆ ಎಂಬುದನ್ನು ಬಸವಣ್ಣನವರ ವಚನ ಅಭಿವ್ಯಕ್ತಿಸುತ್ತದೆ. ಸರಳತೆ, ಮುಗ್ಧತೆ, ಆಪ್ತತೆ, ವಿಶಾಲತೆ, ಇದ್ದರೆ ಪ್ರತಿಯೊಬ್ಬ ವ್ಯಕ್ತಿಯ ಜೊತೆಯಲ್ಲಿಯೂ ಸಹ ಒಳ್ಳೆಯ ಸಂಬಂಧವನ್ನು ಮುಂದುವರಿಸಿಕೊಂಡು ಹೋಗಬಹುದು ಎಂಬುದನ್ನು ನೇಮಿಚಂದ್ರರವರ ಕತೆಗಳಲ್ಲಿ ಕಾಣಬಹುದಾಗಿದೆ.

ವಿಭಿನ್ನ ಮನಸ್ಥಿತಿಗಳ ಅನಾವರಣ, ಸ್ನೇಹ ಪ್ರೀತಿಗಳ ನಡುವಿನ ವ್ಯತ್ಯಾಸ, ಭಾವನಾತ್ಮಕ ಸಂಬಂಧಗಳ ಮಹತ್ವ, ಹವ್ಯಾಸಗಳು ಬದುಕಿನೊಳಗೆ ಒಳಹೊಕ್ಕುವ ರೀತಿ, ನೈತಿಕ ಬದುಕಿನ ಸಾಂಸ್ಕೃತಿಕ ಅನಾವರಣ, ಪ್ರೀತಿಗಾಗಿ, ಪರಿತಪಿಸುವ ಹೃದಯದ ಚಿತ್ರಣ, ಮನಸ್ಸಿನ ವಾಸ್ತವ ಚಿತ್ರಣ, ಅಲಂಕಾರ, ಹೋಲಿಕೆಗಳ ಬಳಕೆ, ಮನಸ್ಸು ದೀರ್ಘಕಾಲೀನ ಬದಲಾವಣೆಗೆ ಒಗ್ಗಿಕೊಳ್ಳುವಿಕೆ, ಭಾವನೆಗಳು ಬದಲಾಗುವಿಕೆ 'ನಿರುತ್ಸಾಹ' ವ್ಯಕ್ತಿತ್ವಗಳ ಆಕರ್ಷಣೆ, ಮನಸ್ಸಿನ ಗೆರೆಯ ಉಳಿಸಿಕೊಳ್ಳುವುದರ ಕುರಿತು ನೇಮಿಚಂದ್ರರವರ ಕತೆಗಳ ಅಭಿವ್ಯಕ್ತವಾಗಿದೆ.

---

೧. ಬಸವಣ್ಣನವರ ವಚನಗಳು.

ಬಳಕೆಯಾಗಿರುವ ಭಾಷಾಸಾಹಿತ್ಯ ಕಥಾಹಂದರ ಬದುಕಿನಲ್ಲಿ ಒಂದು ಹೋಗುವ ವ್ಯಕ್ತಿಗಳ ಮನಸ್ಥಿತಿಗಳನ್ನು ಮತ್ತು ಮನುಷ್ಯನ ಬೇರೆ ಬೇರೆ ವ್ಯಕ್ತಿತ್ವ ಕತೆಯಲ್ಲಿ ಉತ್ತಮವಾಗಿ ಮೂಡಿಬಂದಿದೆ.

ಸಹಜ ಬಯಕೆಗಳ ತಾಕಲಾಟಗಳು, ವಯಸ್ಸಿಗೆ ಮನಸ್ಸು ಪ್ರಬುದ್ಧವಾಗುವಿಕೆ, ಸೌಂದರ್ಯದ ವರ್ಣನೆಯ ಬಣ್ಣನೆಯ ರೀತಿ, ಸಮಾಜದ ವಾಸ್ತವಿಕ ಮನಃಸ್ಥಿತಿ, ಆಸಕ್ತಿಗಳು ಕ್ಷೀಣಿಸುತ್ತಾ ಹೋಗುವ ಜೊತೆಜೊತೆಗೆ ಒಳಗೊಳಗೆ ಚಿಗುರೊಡೆಯುವ ಆಸೆಗಳು, ಒಂದೇ ಮನಃಸ್ಥಿತಿಯ ಎರಡು ವ್ಯಕ್ತಿತ್ವಗಳ ಚಿತ್ರಣ, ಪ್ರೀತಿ ಉತ್ಸಾಹದ ಚಿಲುಮೆ, ಕಾಗೆ–ಕೋಗಿಲೆಗಳ ಸಂಬಂಧದೊಂದಿಗೆ ಬಾಂಧವ್ಯಗಳ ವಸ್ತುಸ್ಥಿತಿ ಬಿಂಬಿತವಾಗಿವೆ.

ಕತೆಗಳಲ್ಲಿ ಲೇಖಕರ ಕೆಲವು ವೈಚಾರಿಕ ಅನುಭವಗಳು ತೆರೆದುಕೊಂಡಂತೆ ಭಾಷವಾಗುತ್ತದೆ. ಮನಸ್ಸಿನ ಒಳಗೊಳಗೆ ಆಸೆಗಳು ಚಿಗುರೊಡೆಯುವ ಕ್ಷಣಗಳನ್ನು ಮನಸ್ಸಿಗೆ ನಾಟುವಂತೆ ಕಟ್ಟಿಕೊಡಲಾಗಿದೆ. ಪ್ರೀತಿ–ಪ್ರೇಮ–ಬಾಂದವ್ಯಗಳ ಮಹತ್ವ ಎಷ್ಟು ಮುಖ್ಯ ಎಂಬ ಅಂಶವನ್ನು ಎತ್ತಿತೋರಿಸಿದ್ದಾರೆ. ಜೀವನದಲ್ಲಿ ಭಾವನಾತ್ಮಕ ಸಂಬಂಧಗಳು ಎಷ್ಟು ಮುಖ್ಯ ಎಂಬುದನ್ನು ಕತೆಗಳಲ್ಲಿ ವಿಶಿಷ್ಟವಾಗಿ ಚಿತ್ರಿಸಿದ್ದಾರೆ.

ಮನಸ್ಸಿನ ಚಂಚಲತೆ, ಮನಸ್ಸಿನ ನೂರು ವಿಭಿನ್ನ ಕ್ರಿಯೆಗಳನ್ನು ಪರಸ್ಪರ ವಿಕರ್ಷಿಸುವ ಭಾವಗಳನ್ನು ರಂಗು–ರಂಗಿನ ಪದಗಳಲ್ಲಿ ಬರೆದಿದ್ದಾರೆ.

ಪ್ರೀತಿ ಚಿಗುರೊಡೆಯುವ ಗಳಿಗೆಯನ್ನು 'ತೆರೆಗಳು ಸರಿದಾಗ' ಕತೆಯಲ್ಲಿ ಪ್ರೀತಿಯು ಅರಳಿದಾಗ ನಮತರ ಮನಃಸ್ಥಿತಿಯಿಂದಾಗುವ ಪ್ರಜ್ಞಾಸ್ಥಿತಿಯನ್ನು ತೆಗೆಯಲು ಪ್ರಯತ್ನಿಸಿದ್ದಾರೆ.

ಒಬ್ಬ ವ್ಯಕ್ತಿಯ ಬಣ್ಣದ ಮಾತುಗಳನ್ನು ನಂಬಿ ಪ್ರೇಮಿಸುವ ಕಥಾನಾಯಕಿಯ ಸ್ಥಿತಿ, ಚಂಚಲತೆ, ಮುಗ್ಧತೆಗಳನ್ನು ಕತೆಗಳಲ್ಲಿ ನೇಮಿಚಂದ್ರರವರು ತೋರಿಸಿದ್ದಾರೆ.

ಸಾವಿನಂಚಿನಲ್ಲಿರುವ ವ್ಯಕ್ತಿಯೊಬ್ಬನ ಮಾನಸಿಕ ಭಾವನೆಗಳನ್ನು ಪಾತ್ರದ ಮೂಲಕ ಹೇಳಲಾಗಿದೆ. ಸಾವು ಸಮೀಪಿಸುವ ಗಳಿಗೆ ತಿಳಿದಾಗ ಮನಸ್ಸಿನಲ್ಲಿ ಆಗುವ ನೂರೆಂಟು ಭಾವನೆಗಳ ಏರಿಳಿತಗಳನ್ನು ಕಾಣಬಹುದು.

ನಿರ್ಭಯತೆ, ಆಶಾವಾದ ಮತ್ತು ಸಾಮಾಜಿಕ ಸಮಸ್ಯೆಗಳ ಬಗೆಗಿನ ವಿಶಾಲ ದೃಷ್ಟಿಯ ಸಂಕೇತವಾಗಿ ಕತೆಗಾರ್ತಿ ಇಲ್ಲಿ ಪರಿಗಣಿತರಾಗಿದ್ದಾರೆ. ಸಾಮಾಜಿಕ ಹಾಗೂ ಕೌಟುಂಬಿಕ ದೃಷ್ಟಿಯಿಂದಲೂ ಉಪಯುಕ್ತ ಬರೆಹಗಳನ್ನು ಬರೆದಿದ್ದಾರೆ.

ಸಮಾಜದಲ್ಲಿ ಪರಸ್ಪರರ ಬಗ್ಗೆ ವಿಶ್ವಾಸ ಮಾಯವಾಗಿ ದ್ವೇಷ, ಅಸೂಯೆ, ಸೇಡು ತೀರಿಸಿಕೊಳ್ಳುವ ಭಾವವುಂಟಾಗುತ್ತದೆ. 'ಮಾನವ ಜನ್ಮ ದೊಡ್ಡದು' ಎಂಉ ಒಬ್ಬ ಸಂತರು ಹೇಳಿದರು. ಇದು ನಿಜವಾಗಬೇಕಾದರೆ ಮಾನವನ ಮನಸ್ಸು ವಿಶಾಲ-ವಾಗಬೇಕು.

'ಮೂಢನಂಬಿಕೆಗಳು' ಎಲ್ಲಾ ಕಾಲದ ಎಲ್ಲ ದೇಶದ ಎಲ್ಲ ಜನಾಂಗಗಳಲ್ಲಿ ಉಂಟಾದರೂ ಈ ದಿನ ಭಾರತೀಯರಿಗೆ ಮಾತ್ರ ಮೂಢನಂಬಿಕೆ ಹೆಚ್ಚೆಂದೂ ವಾದಿಸುವವರನ್ನು ನಾವು ಕಾಯುತ್ತಿದ್ದೇವೆ. ಭಾರತೀಯರ ಮೂಡನಂಬಿಕೆಗಳಿಂದಲೇ ಹಿಂದೆ ಉಳಿದಿದ್ದಾರೆ ಎಂಬ ಮಾತು ಆಗಾಗ್ಗೆ ಕೇಳಿ ಬರುತ್ತಿದ್ದು ಇದು ಎಷ್ಟರಮಟ್ಟಿಗೆ ಸರಿ ಎಂಬುದು ನೇಮಿಚಂದ್ರರ ಕತೆಗಳಲ್ಲಿ ವಿಚಾರಾರ್ಹವಾಗಿದೆ.

ಯಾವ ನಂಬಿಕೆಗಳಲ್ಲಿ ಮೌಢ್ಯತೆ ತುಂಬಿರುವುದೋ ಅದನ್ನು ಮೂಢನಂಬಿಕೆ-ಗಳೆಂದು ಕರೆಯುವುದು ಯುಕ್ತ.

ದೇವರಿದ್ದಾನೆ ಎಂದು ನಂಬಿ ಅವನ ಧ್ಯಾನ, ಪೂಜೆಗಳಲ್ಲಿ ನಿರತರಾಗಿ ಭಗವಂತನಿಂದ ತಮ್ಮ ಜೀವನದಲ್ಲಿ ಅನುಕೂಲವಾಯಿತೆಂದು ಯಾರಾದರೂ ಹೇಳಿದರೆ ತಕ್ಷಣ ವಿಚಾರವಂತರು. ಅಂತಹವರ ಮೇಲೆ ಬಿದ್ದು ನಿಮ್ಮ ಭಗವಂತ ಜಗತ್ತಿನ ಜನರ ಎಲ್ಲ ಕಷ್ಟಗಳನ್ನು ಈಗಲೇ ಪರಿಹರಿಸಲಿ ಎಂದು ಬೊಬ್ಬೆ ಇಡುವುದುಂಟು.

ಒಂದು ದೃಷ್ಟಿಯಲ್ಲಿ ಆಳವಾಗಿ ಆಲೋಚನೆ ಮಾಡಿದರೆ ನಮ್ಮ ದೇಶದ ಸಿದ್ಧಾಂತಕ್ಕೆ, ಮೂಡನಂಬಿಕೆಗೂ ನೇರ ಸಂಬಂಧವಿಲ್ಲವೆನ್ನಬಹುದು. ಮಾನವರು ಜೀವನದಲ್ಲಿ ಅವನೆಷ್ಟೇ ಪ್ರಾಮಾಣಿಕವಾಗಿದ್ದರೂ ಹಲವು ಪ್ರಸಂಗಗಳಲ್ಲಿ ಅವನು ಸೋಲಬಹುದು. ಅಂತಹ ಸಂದರ್ಭದಲ್ಲಿ ಎದೆಗುಂದದೆ ಪ್ರಯತ್ನವನ್ನು ಮುಂದುವರಿಸಿದರೆ ಯಶಸ್ಸು ಸಿಗುವುದು. ಕರ್ತವ್ಯನಿಷ್ಠೆ, ಸತ್ಯಸಂಧತೆ, ಪ್ರಾಮಾಣಿಕತೆ, ಕಷ್ಟಪಟ್ಟು ದುಡಿಯುವ ಪ್ರವೃತ್ತಿ, ರಾಷ್ಟ್ರಾಭಿಮಾನ, ಪರಮತ ಸಹಿಷ್ಣುತೆ, ಹೆಣ್ಣಿಗೆ ಗೌರವ ಕೊಡುವುದು, ವೈಚಾರಿಕತೆ ಇತ್ಯಾದಿಗಳನ್ನು ಬೆಳೆಸಿಕೊಂಡಾಗ ಮಾನವನ ಮನಸ್ಸು ಎಂತಹ ಕ್ಲಿಷ್ಟ ಪರಿಸ್ಥಿತಿಯಲ್ಲೂ ನಗುನಗುತ್ತಾ ಎದುರಿಸುವ ಶಕ್ತಿಯನ್ನು ಪಡೆದು-

ಕೊಳ್ಳುತ್ತದೆ. ಪುರಂದರದಾಸರು ದೊಡ್ಡ ಹರಿಭಕ್ತರು. ಅವರು "ಈಸಬೇಕು ಇದ್ದು ಜೈಸಬೇಕು" ಎಂದರು. "ಮಾನವ ಜನ್ಮದೊಡ್ಡದು. ಇದ ಹಾನಿ ಮಾಡಿಕೊಳ್ಳಬೇಡಿ ಎಂದರು. ಈ ನಿಟ್ಟಿನಲ್ಲಿ ನೇಮಿಚಂದ್ರರವರ ಕತೆಗಳು ಗಮನಾರ್ಹ.

ಮನುಷ್ಯನು ಮೂಲಭೂತವಾಗಿ ಆಶಾವಾದಿ, ಇವನಿಗೆ ಆಸೆ ಅಧಿಕವಾಗುತ್ತಿದ್ದಂತೆ ವರ್ತಮಾನದ ಸುಖಗಳಿಂದ ವಂಚಿತನಾಗಿ ಭವಿಷ್ಯದ ಭವ್ಯ ಬಾಳ್ವೆಗೆ ಆಸೆಪಟ್ಟು ದುಃಖಿಯಾಗುವ ಸಾಧ್ಯತೆಯುಂಟು. ಗಗನಕುಸುಮಕ್ಕೆ ಕೈಚಾಚಿ ದೊರಕದೆ ಹತಾಶನಾಗುವುದಕ್ಕಿಂತ ನೆಲದ ಮೇಲೆ ಹರಡಿರುವ ಬಳ್ಳಿಯ ಹೂವನ್ನು ನೋಡಿ ನಲಿಯುವುದೇ ಲೇಸು ಎಂಬುದರ ಕುರಿತಾಗಿ ನೇಮಿಚಂದ್ರರವರು ಕತೆಗಳಲ್ಲಿ ಚಿತ್ರಿಸಿದ್ದಾರೆ.

ಮಾನವನ ಬದುಕು ಕಷ್ಟಗಳ ತೆಕ್ಕೆಯಲ್ಲೇ ಮುಂದುವರೆಯುತ್ತಿರುತ್ತದೆ. ಕಷ್ಟಗಳಿಂದ ತತ್ತರಿಸಿದ ಮನುಷ್ಯ ಅದರಿಂದ ಪಾರಾಗಲು ನಾನಾ ರೀತಿಗಳಲ್ಲಿ ಪ್ರಯತ್ನಿಸುವನು. ಹೀಗೆ ಪ್ರಯತ್ನಿಸುವಾಗ ಕೆಲವೊಮ್ಮೆ ಅವನು ತನ್ನಿಚ್ಛೆ ಪ್ರಯತ್ನಗಳಿಂದ ಹೊಂದುವ ಬದಲಾವಣೆಗಳಿಂದ ಸುಖವನ್ನು ಪಡೆಯುವುದರ ಬದಲಾಗಿ ಇನ್ನಷ್ಟು ದುಃಖವನ್ನೇ ಕಷ್ಟಗಳನ್ನೇ ಅನುಭವಿಸುವಂತಾಗುತ್ತದೆ. ಅಂತಹವುಗಳ ಬಗ್ಗೆ ಕತೆಗಳಲ್ಲಿ ಅಭಿವ್ಯಕ್ತವಾಗಿದೆ.

'ಉಪ್ಪಿಗಿಂತ ರುಚಿಯಿಲ್ಲ, ತಾಯಿಗಿಂತ ಬಂಧುವಿಲ್ಲ' ಎಂಬ ಗಾದೆಯಂತೆ ತಾಯಿ ಮಗುವಿಗೆ ತೋರಿಸುವ ಪ್ರೀತಿ ವಾತ್ಸಲ್ಯಗಳನ್ನು ಚಿತ್ರಿಸಿದ್ದಾರೆ. ಕುಮಾರವ್ಯಾಸನು ಒಂದು ಕಡೆ 'ಬಂಧುಗಳ ದರ್ಶನ ಫಲವಲಾ ಸಂಸಾರ ತರುವಿಂಗೆ' ಎಂದಿದ್ದಾನೆ. ಬಂಧುಗಳ ದರ್ಶನ ಎಂಬುದು ಬದುಕಿನಲ್ಲಿ ಒಂದು ಸಾರ್ಥಕ ಕ್ಷಣವೆಂಬುದು ಇದರ ತಾತ್ಪರ್ಯ. ಈ ಬಂಧು ಸಮುದಾಯದಲ್ಲಿ ಕಿರೀಟಪ್ರಾಯವಾಗಿ ಧ್ರುವನಕ್ಷತ್ರದಂತಿರುವ ವ್ಯಕ್ತಿ ಎಂದರೆ ತಾಯಿ, ತಾಯಿಯು ತನ್ನ ಮಕ್ಕಳನ್ನು ಪ್ರೀತಿಸುವ ಹಾಗೆ ಇತರ ಯಾವ ಬಂಧುಗಳು ಪ್ರೀತಿಸಲು ಸಾಧ್ಯವಿಲ್ಲ. ತಾಯಿ ತಾಯಿಯೇ; ಆ ತಾಯಿಯ ವಾತ್ಸಲ್ಯವನ್ನು ಅನುಭವಿಸುತ್ತಿರುವ ಪ್ರತಿಯೊಬ್ಬರಿಗೂ ಇದು ಮನವರಿಕೆಯಾಗುತ್ತಿರುವ ಅಂಶವಾಗಿದೆ. ಆದ್ದರಿಂದಲೇ ನಮ್ಮಲ್ಲಿ 'ಮಾತೃದೇವೋಭಾವ' ಎಂದಿರುವುದು.

ಯಾವ ಪ್ರತಿಫಲವನ್ನು ಬಯಸದೆ ಮಕ್ಕಳನ್ನು ಪ್ರೀತಿಸಿ, ಮುದ್ದಿಸಿ, ಸಾಕಿ ಸಲಹಿ, ವಿದ್ಯಾವಂತರನ್ನಾಗಿ ಮಾಡಿ ಹರಸುವ ತಾಯಿಯನ್ನಲ್ಲದೆ ಇನ್ನು ಯಾರನ್ನು ತಾನೆ 'ದೇವರು' ಎನ್ನಲಾದೀತು? ಹೇಗೆ ಪ್ರತಿಯೊಂದು ಪದಾರ್ಥವು ರುಚಿಯನ್ನು

ಪಡೆಯುವುದಕ್ಕೆ ಉಪ್ಪು ನೆರವಾಗುವುದೋ ಹಾಗೆ ಬದುಕಿನಲ್ಲಿ ಮಗುವಿಗೆ ತಾಯಿಯೇ ಸುಖಪ್ರದಳು.

ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಸಣ್ಣಕತೆಗಳು ಒಂದು ಸ್ವತಂತ್ರವಾದ ಸಾಹಿತ್ಯ ಪ್ರಕಾರವಾಗಿ ಬೆಳೆದುಕೊಂಡು ಬಂದಿದೆ. ಇಪ್ಪತ್ತನೇ ಶತಮಾನದ ಸಂಧ್ಯಾ ದಶಕಗಳಲ್ಲಿ ಸಣ್ಣಕತೆ ಬೆಳೆಯತೊಡಗಿತು. ಬಹಳಷ್ಟು ಸೃಜನಶೀಲ ಸಣ್ಣಕತೆಯ ಸಾಹಿತಿಗಳು ಪ್ರವರ್ಧಮಾನಕ್ಕೆ ಬರತೊಡಗಿದರು. ಅವರುಗಳಲ್ಲಿ ನೇಮಿಚಂದ್ರರವರು ವಿಭಿನ್ನವಾಗಿ ನಿಲ್ಲುತ್ತಾರೆ. ಭಾರತದಂತಹ ಬೃಹತ್‌ಧರ್ಮದ ಹಿನ್ನೆಲೆಯ ದೇಶಗಳಲ್ಲಿ ಸಣ್ಣಕತೆಯು ಬೆಳೆದುನಿಂತಿದೆ.

ರೈಲಿನ ಪ್ರಯಾಣವು ಹೇಗೆ ಚಾಲಕನ ಹಿಡಿತಕ್ಕೆ ಹೊಂದಿಕೊಳ್ಳುವಂತೆ ಸರೋಜಳಳ ಬಾಂಬೆಯ ಪ್ರಯಾಣವು ಲಲ್ಲಿ ಮತ್ತು ಅವಳ ಕುಟುಂಬದ ಕುರುಡು ಸಂಪ್ರದಾಯಕ್ಕೆ ಬಲಿಯಾಗುವಂತದ್ದು ಮತ್ತು ಮನಸ್ಸಿನ ಹೊಯ್ದಾಟ, ತುಮುಲಗಳ ಬಗ್ಗೆ ಕತೆಯಲ್ಲಿ ನೇಮಿಚಂದ್ರರವರು ನಿರೂಪಿಸಿದ್ದಾರೆ. ಹೆಣ್ಣು, ಕನ್ಯಾತ್ವ, ವಿಧವೆ ಈ ಮೂರು ಪದಗಳೇ 'ನನ್ನದಲ್ಲದ ಬದುಕಿಗಾಗಿ' ಕತೆಯಲ್ಲಿ ಕೇಂದ್ರಬಿಂದುವಾಗಿದ್ದು ಭಿನ್ನತೆ, ಉದ್ವೇಗಗಳ ಸರಮಾಲೆಯನ್ನು ಕತೆಯಲ್ಲಿ ನಿರೂಪಿಸಿದ್ದಾರೆ.

ತಾಯಿಯ ತಾಯ್ತನದ ಬಗ್ಗೆ ಸಂಪೂರ್ಣ ಚಿತ್ರವನ್ನು 'ಹೊಸಹುಟ್ಟು' ಕತೆಯಲ್ಲಿ ಚಿತ್ರಿಸಿದ್ದಾರೆ. ಗಂಡನು ಹೆಂಡತಿಗೆ ನೈತಿಕವಾಗಿ ಬೆಂಬಲವಾಗಿ ನಿಲ್ಲುವಂತದ್ದನ್ನು ಕಾಣಬಹುದು ಮತ್ತು ಗಂಡು ಮತ್ತು ಹೆಣ್ಣು ಒಂದೇ ಎಂಬ ಮಾನದಂಡಕ್ಕೆ ಒಂದು ಸ್ಥಿರ ಚಿತ್ರಣವನ್ನು ಈ ಕತೆಯಲ್ಲಿ ಪ್ರದರ್ಶಿಸಿದ್ದಾರೆ.

**ಬದುಕು ಕಾಯುವುದಿಲ್ಲ** ಎಂಬ ಕತೆಯಲ್ಲಿ ಸುಂದರ ಸಂಜೆಯ ವರ್ಣನೆ ಮಾಡಿರುವುದು, ಕತೆಯಲ್ಲಿಯೂ ಕೂಡ ಪ್ರಕೃತಿಯ ವರ್ಣನೆ ಕತೆಯ ಮಹತ್ವವನ್ನು ಎತ್ತಿಹಿಡಿಯುತ್ತದೆ. ಈ ದಿಸೆಯಲ್ಲಿ ಕತೆಗಾರ್ತಿ ನಕ್ಷತ್ರಗಳ ಬಗೆಗೆ, ಇರುಳ ಬಗೆಗೆ, ಸಾಗರವನ್ನು ಕಡಲನ್ನು ನೋಡುವಾಗ ಆಗುವ ಸಂತೋಷ, ಮೈಮನಸ್ಸನ್ನು ಮರೆತು ಬೆರಗಾಗುವಂತೆ ಏಕಾಂತದಲ್ಲಿ, ಮೌನದಲ್ಲಿ ಸೌಂದರ್ಯವನ್ನು ತುಂಬಿಕೊಳ್ಳುತ್ತಿದ್ದಾಳೆ, ಕಾಯುತ್ತಾ.

ಆದರೆ ಪಕ್ಕದಲ್ಲಿದ್ದ ಗಂಡನ ಮನಸ್ಥಿತಿಗೂ ಆಕೆಯ ಮನಸ್ಥಿತಿಗೂ ಅಜಗಜಾಂತರ ವ್ಯತ್ಯಾಸವಿದೆ. ಆಕೆ ಪ್ರಕೃತಿಯ ರಮಣಿಯತೆಯನ್ನು, ಸುಂದರ

ಸಂಜೆಯನ್ನು ಆಸ್ವಾದಿಸುವ ಸಹೃದಯತೆ ಗಂಡನಾದ ವಿರೂನಲ್ಲಿ ಕಾಣುವುದಿಲ್ಲ. ಇದು ಇವರಿಬ್ಬರ ನಡುವಿನ ಮನಃಸ್ಥಿತಿ.

ಮ್ಯಾನೆಜೀಂಗ್ ಡೈರಕ್ಟರ್‌ಗೆ ರೀಪೋರ್ಟ್ ಹೋಯಿತೋ ಇಲ್ಲವೋ ಎಂಬ ಕೆಲಸದ ಒತ್ತಡ ಮತ್ತು ಅದರಲ್ಲಿಯೇ ಸಂಪೂರ್ಣವಾಗಿ ತೊಡಗಿಸಿಕೊಂಡ ವಿರೂ ಕುಟುಂಬದಲ್ಲಿ ಮನಸ್ಥಿತಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಕಛೇರಿಯ ಕಡತಗಳನ್ನು, ವಿಷಯಗಳನ್ನು ಹೆಗಲಮೇಲೆ ಹಾಕಿಕೊಂಡು, ತಣ್ಣನೆಯ ಗಾಳಿಯಲ್ಲಿ ಕಛೇರಿಯ ತಿರುಗು ಕುರ್ಚಿಯಲ್ಲಿ ಕುಳಿತು ಕೆಲಸಮಾಡುವಂತೆ ಅವನು ಮಜ್ಞನಾಗಿದ್ದ. ಮನಗೆಗೆ ರಜೆಯ ದಿನಗಳಲ್ಲಿಯೂ ಕೂಡ ಕಛೇರಿಯ ಬೇತಾಳವನ್ನು ಹೆಗಲಮೇಲೆ ಹೊತ್ತಿಕೊಂಡು ಮನೆಯಲ್ಲಿ ಯಾವುದೇ ರಸಮಯ ಸುಂದರ ವಾತಾವರಣ-ವಿರುವುದಿಲ್ಲ.

"ವಿಸೂ ಸದಾ ಓಡದ ಮೈದಾನದಲ್ಲಿ ಪಂದ್ಯ ಕಟ್ಟಿ ನಿಂತ ಓಟಗಾರ. ಕ್ಷಣ ನಿಲ್ಲದೆ, ಕುಳಿತುಕೊಳ್ಳದೇ, ಮುಡಾನವರನ್ನೆಲ್ಲ ಹಿಂದೆ ಹಾಕುವ ಛಲದಲ್ಲಿ ಹಿಂದಿನವರೆನ್ನೆಲ್ಲ ಅಡ್ಡಕಟ್ಟಿ ಓಡುವ ಜಯದಲ್ಲಿ ಓಟದ ಖುಷಿಯನ್ನೇ ಮರೆತವನು. ಆ ಓಟದ ತುದಿಗೆ ಯಾವುದೋ ಅದ್ಭುತ ಬಹುಮಾನವಿದೆಯೆಂಬ ಭ್ರಮೆ, ಬೆಳಿಗ್ಗೆ ಏಳುತ್ತಿದ್ದಂತೇ ಆತುರ, ಅವಸರ, ಎಂಟಕ್ಕೆ ಕಚೇರಿ, ಮತ್ತೆ ಬರುತ್ತಿದ್ದದ್ದು ರಾತ್ರಿ. ಕಂತೆ ಫೈಲುಗಳು ಬಗಲಲ್ಲಿ ತನಗೇ ಸಮಯವಿಲ್ಲದವರು, ಬೇರೆಯವರಿಗೇನೂ ಕೊಟ್ಟಾರು? ಎರಡು ದಿನಕ್ಕೆ, ಕೇವಲ ಎರಡು ದಿನಕ್ಕೆ ಗೋವಾಕ್ಕೆ ಬಂದದ್ದು, ಕಾಡಿಬೇಡಿ ಮತ್ತೊಂದು ಮಧುಚಂದ್ರದ ಸಂಭ್ರಮಕ್ಕೆ ಎಳೆತಂದಿದ್ದಳು."[೧]

ಯಾವಾಗಲೂ ಕಛೇರಿಯ ಬಗೆಗೆ ಆಸಕ್ತಿ, ಪ್ರಸ್ತುತ ಸನ್ನಿವೇಶದಲ್ಲಿ ನಗರಪ್ರದೇಶದಲ್ಲಿ ದುಡಿಯುವಂತಹ ಹೆಚ್ಚಿನ ಜನ ಒತ್ತಡದ ಕೆಲಸದಲ್ಲಿ ತಮ್ಮ ಮಾನಸಿಕವಾಗಿ ಕುಗ್ಗಿ, ಕಛೇರಿಗಳಿಗೆ ಕಡತಗಳಿಗೆ ದಾಸನಾಗಿ ಕುಟುಂಬಕ್ಕೆ ತೋರಿಸುವ ಆಧರವನ್ನು ಕಳೆದುಕೊಳ್ಳುತ್ತಿರುವುದು ವಾಸ್ತವದ ಸಂಗತಿಯಾಗಿದೆ.

ತಮ್ಮ ಎಲ್ಲ ಅವಧಿಯನ್ನು, ಸಮಯವನ್ನು ಕಛೇರಿಗೆ ಎಂ.ಪಿಗೆ ಕೊಟ್ಟಿದ್ದರಿಂದ ಸಹಜವಾಗಿಯೇ ಕುಟುಂಬಕ್ಕೆ ಸಮಯವನ್ನು ಎಲ್ಲಿ ತಾನೇ ಮೀಸಲಿಡಲಾಗುತ್ತದೆ. ಕಾಡಿಬೇಡಿ ಎರಡು ದಿನಕ್ಕೆ ಗೋವಾಕ್ಕೆ ಕರೆದುಕೊಂಡು ಬಂದರು. ಅಲ್ಲಿಯೂ ಸಹ ಕಛೇರಿಯ ವಿಷಯಗಳನ್ನು ಹೇಳುತ್ತಾ, ಕುಟುಂಬವನ್ನು ಮೈಮರೆಯುವಂತದ್ದು,

---

೧. ನೇಮಿಚಂದ್ರ, ಬದುಕು ಕಾಯುವುದಿಲ್ಲ, ಪುಟ ಸಂಖ್ಯೆ. ೭೫.

ಎಲ್ಲೋ ಒಂದುಕಡೆ ನಮಗೆ ಸ್ಪಷ್ಟವಾಗಿ ಗೋಚರಿಸುತ್ತದೆ, ಮೊದಲು ಇದ್ದಂತಹ ಪ್ರೀತಿ, ಪ್ರೇಮ, ಆಧರಗಳು, ಭಾವನೆಗಳು, ಅನಿಸಿಕೆಗಳು, ಅಭಿಪ್ರಾಯಗಳು, ಆಚಾರವಿಚಾರಗಳು ಮರೆಯಾಗುತ್ತಿವೆ ಎಂಬ ಭಾವನೆ ಸಹಜವಾಗಿಯೇ ನಮ್ಮ ಮನಗಳಲ್ಲಿ ಹಾದುಹೋಗುತ್ತದೆ.

"ನನಗೆ ಹಾಗೆಲ್ಲ ರಜೆ ಹಾಕೋಗಾಗಲ್ಲ ಸಂಯುಕ್ತಾ, ಎಷ್ಟು ಜವಾಬ್ದಾರಿಗಳಿವೆ. ಇವತ್ತೇ ಹೆಡ್ ಆಫೀಸಿಗೆ ರಿಪೋರ್ಟ್ ಹೋಗಬೇಕು, ದಿಲ್ಲಿಗೆ ಫ್ಯಾಕ್ಸ್ ಕಳುಹಿಸಬೇಕು"[೧]

"ವಿಶೂ ಪ್ಲೀಸ್ ನಾನೂ ನನ್ನ ಕೆಲಸದ ಪಟ್ಟಿ ತೆಗೆದಿಟ್ರೆ ಅದು ಮುಗಿಯೋಲ್ಲ. ಇವತ್ತು, ಮಧ್ಯಾಹ್ನ ಬಂದುಬಿಡು ಸಾಕು" ಎಂದು ಗೋಗರೆಯುವ ಎರಡು ಸಂಭಾಷಣೆಗಳನ್ನು ನೋಡಿದಾಗ, ಗಮನಿಸಿದಾಗ ನಮಗೆ ಅರ್ಥವಾಗುವಂತದ್ದು ಗಂಡಹೆಂಡತಿಯರ ನಡುವೆ ಯಾವುದೇ ಬಗೆಯ ಅರ್ಥಮಾಡಿಕೊಳ್ಳುವಿಕೆಯಲ್ಲಿಯ ಕೊರತೆ ಎದ್ದುಕಾಣುತ್ತದೆ.

ಮನೆಯ ಯಾವುದೇ ಕೆಲಸವೂ ವಿಸೂಗೆ ಬೇಕಾಗಿಲ್ಲ. ಏಕೆಂದರೆ ಆತನಿಗೆ ಕುಟುಂಬದ ಅರ್ಥನೇ ಗೊತ್ತಾಗುವುದಿಲ್ಲ. ಕಛೇರಿಯ ಕೆಲಸದಲ್ಲಿ ಮಗ್ನನಾಗಿದ್ದ, ಮುಳುಗಿಹೋಗಿದ್ದನಿಂದ ಮನೆಯಲ್ಲಿಯ ಕಷ್ಟಸುಖಗಳಿಗೆ ದುಃಖದುಮ್ಮಾನಗಳಿಗೆ, ಭಾವನೆಗಳಿಗೆ, ಮನಸ್ಸಿಗೆ ಸ್ಪಂದಿಸುವ ನಿಕಟವಾದ ಕೆಲಸವನ್ನು ವಿಶೂ ಮಾಡದಿರುವುದೇ ಇಬ್ಬರ ವಿರಸಕ್ಕೆ ಕಾರಣವಾಗಿದೆ.

ಮತ್ತು ಕಛೇರಿಯ ಕೆಲಸವನ್ನು ನಿರ್ವಹಿಸಿಕೊಂಡು ಮನೆಯನ್ನು ಕುಟುಂಬದ ನಿರ್ವಹಣೆಯನ್ನು ಮಾಡುವುದು ಅಷ್ಟೊಂದು ಸುಲಭದ ಮಾತಲ್ಲ. ಈ ದಿಸೆಯಲ್ಲಿ ಸಂಯುಕ್ತಾಳ ನಿರ್ವಹಣೆ ಮೆಚ್ಚುವಂತದ್ದೂ ಮತ್ತು ಪ್ರಸ್ತುತ ಅನೇಕ ಕಛೇರಿಗೆ ಹೋಗಿ ಮನೆಯ ಕುಟುಂಬವನ್ನು ನಿರ್ವಹಿಸುವಂತಹ ಮಹಿಳೆಯ ಸ್ಥಿತಿಗತಿಗಳು ನಗರಪ್ರದೇಶಗಳಲ್ಲಿ ಹೆಚ್ಚಾಗಿ ಕಾಣಬಹುದು.

ಅವರ ನೋವುಗಳನ್ನು, ನಲಿವುಗಳನ್ನು, ಅನಿಸಿಕೆಗಳನ್ನು, ಭಾವನೆಗಳನ್ನು, ಅಭಿಪ್ರಾಯಗಳನ್ನು ಕೇಳುವಂತಹ ಸ್ಥಿತಿಯಲ್ಲಿ ಗಂಡನಿರುವುದಿಲ್ಲ. ಇಲ್ಲಿ ಗೃಹಿಣಿ ಮತ್ತು ಕಛೇರಿಗೆ ಹೋಗಿ ಕೆಲಸ ನಿರ್ವಹಿಸುವ ಮಹಿಳೆಯ ಯಾತನೆಗಳ ಬಗೆಗೆ ಕತೆಗಾರ್ತಿ ನೇಮಿಚಂದ್ರ ತುಂಬ ವರ್ಣಮಯವಾಗಿ ಚಿತ್ರಿಸಿದ್ದಾರೆ.

೧. ನೇಮಿಚಂದ್ರ, ಬದುಕು ಕಾಯುವುದಿಲ್ಲ, ಪುಟಸಂಖ್ಯೆ ೭೬.

ಈ ನಿಟ್ಟಿನಲ್ಲಿ ಗಂಡನಾದವನು ಹೆಂಡತಿಯ ಭಾವನೆಗಳಿಗೆ, ಅಭಿಪ್ರಾಯಗಳಿಗೆ ಬೆಲೆಕೊಟ್ಟು ಕೆಲಸದ ಜೊತೆಜೊತೆಗೆ ಕುಟುಂಬಕ್ಕೂ ಅದಮ್ಯ ಪ್ರೀತಿಯನ್ನು ಆಧರವನ್ನು ಕೊಡಬೇಕಾಗಿದೆ.

ಗಂಡನಂತೆ ಹೆಂಡತಿಯೂ ಕೂಡ ನಡೆದುಬಿಡಬಹುದು. ಆದರೆ ಮಗುವಿನ ಭವಿಷ್ಯ, ಕುಟುಂಬದ ಸಾರ್ಥಕ ಜೀವನ ಇವೆಲ್ಲವುಗಳ ಮಧ್ಯೆ ಆಕೆ ಜೀವನ ನಡೆಸಬೇಕಾಗಿರುತ್ತದೆ. ಉದ್ವಿಗ್ನಗೊಂಡ ಮನಸ್ಸನ್ನು ಸಮಾಧಾನಗೊಳಿಸಿಕೊಂಡು ಹೋಗಬೇಕಾಗಿದೆ.

"ಇಂದು ಬದಲಾಗಿದೆ ಬದುಕು, ಎರಡು ಕರ್ಪೂರದ ಬೊಂಬೆ ಇಟ್ಟುಕೊಂಡು, ಅಮ್ಮನ ಮುದ್ದೆ ಸೊಪ್ಪುಗಳಲ್ಲಿ ಕ್ರಿಕೆಟ್ ಆಡಿ, ಸೊಸೈಟಿಯ ಕೋರಾಬಟ್ಟೆಯ ಚಡ್ಡಿ ಶರಾಯಿ ಹೊಲೆಸಿಕೊಂಡು 'ಅಜ್ಜನ ಕೋಲಿದು ನನ್ನಯ ಕುದುರೆ' ಎಂದು ಬೆಳೆದ ಬಾಲ್ಯವಲ್ಲ. ಹತ್ತು ಪೈಸೆಯ ಬಡಕಲುಬಾಡಿಗೆ ಸೈಕಲ್ ತುಳಿದು ಪರಮಾನಂದಪ್ಪ ಪಾತ್ರಗಳಿಲ್ಲ. ಆದರೆ ಏಕಿಲ್ಲ_.? ಎಲ್ಲ ಬದಲಾಗಿದೆ. ಈ ತಾಂತ್ರಿಕ ಯುಗದಲ್ಲಿ ಬದುಕು ಬದಲಾಗಿದೆ ಎಂದರೆ ಸಂಯುಕ್ತಾ ಒಪ್ಪುವುದಿಲ್ಲ. ಬದಲಾದದ್ದು ಕಾಲವಲ್ಲ, ವಿಜ್ಞಾನವಲ್ಲ, ನಮ್ಮ ಆಸೆಗಳು, ಆದ್ಯತೆಗಳು ಎನ್ನುತ್ತಾಳೆ. ಅಂತಹ ಅಗತ್ಯಗಳಲ್ಲಿ ತೃಪ್ತ ಬದುಕು. ಇಲ್ಲಿ ಪೂರೈಸದ ಬಾಯಾರಿಕೆ, ಬದುಕಿಗೆ ಇಷ್ಟೆ ಆಸೆಗಳಿರಲಿಲ್ಲ. ಇಡೀ ಜಗತ್ತನೇ ಕೊಂಡು ಶೋಕೇಸಿನಲ್ಲಿ ತುಂಬಿಡುವ ಬಯಕೆ ಇರಲಿಲ್ಲ. 'ಸಮಸ್ಯೆ ನಮ್ಮಿಂದ ಹೊರಗಿಲ್ಲ. ಇಲ್ಲಿ ಹುಡುಕಿ ವಿಸ್ಮಯ ಎನ್ನುತ್ತಾಳೆ."[೧]

ಆಧುನಿಕ ಸ್ಪರ್ಶಕ್ಕೆ ಇಂದು ನಾವು ಮನಸೋತಿದ್ದೇವೆ. ನಗರೀಕರಣ, ಕೈಗಾರಿಕೀಕರಣ, ಜಾಗತೀಕರಣದ ಮೊರೆಹೋಗಿದ್ದೇವೆ. ಅಜ್ಜ, ಅಜ್ಜಿ ಕುಟುಂಬದ ಹಿರಿಯರನ್ನು, ಕುಟುಂಬದವರನ್ನು ಬಿಟ್ಟಿದ್ದೇವೆ. ಕುಟುಂಬದಲ್ಲಿದ್ದರೂ ಕೂಡ ಕಛೇರಿಯ, ಯಾಂತ್ರಿಕ ಜೀವನಕ್ಕೆ ಮನಸೋತು ಅದರಲ್ಲಿಯೇ ಮುಳುಗಿದ್ದೇವೆ. ನಮ್ಮ ಆಸೆಗಳು, ಆದ್ಯತೆಗಳು ಬದಲಾಗಿದೆ. ಹಿಂದಿನ ಕಾಲದಲ್ಲಿ ತೃಪ್ತ ಬದುಕು ಇರುತ್ತಿತ್ತು. ಇಲ್ಲಿ ಅತೃಪ್ತದ ಜೀವನವನ್ನು ಸಾಗಿಸುತ್ತಿದ್ದೇವೆ. ಆದರೆ ಆಧುನಿಕ, ವೈಜ್ಞಾನಿಕ, ಪಾಶ್ಚಿಮಾತ್ಯ ಸಂಪ್ರದಾಯವನ್ನು ನಮಗೆ ಗೊತ್ತಿಲ್ಲದೆ ಅಪ್ಪಿಕೊಂಡಿರುವದು ವಿಪರ್ಯಾಸವೇ ಸರಿ.

೧. ನೇಮಿಚಂದ್ರ, ಬದುಕು ಕಾಯುವುದಿಲ್ಲ, ಪುಟಸಂಖ್ಯೆ. ಪುಟಸಂಖ್ಯೆ ೮೧.

ರೇಸಿನ ಕುದುರೆಯಂತೆ ಕಣ್ಣಿಗೆ ಅಡ್ಡಪಟ್ಟಿಕಟ್ಟಿಕೊಂಡು ಓಡುವ ಜಾಯಮಾನ ನನ್ನದಲ್ಲ. ನನಗೆ ವೇಗ ಮುಖ್ಯವಲ್ಲ, ನಾವು ನಡೆಯುವ ಗುರಿ, ಉದ್ದೇಶಗಳ ಮುಖ್ಯ ಎನ್ನುವುದು. ಅವಳ ಆಂತರೀಕ ತುಮುಲಗಳನ್ನು ಬಿತ್ತರಿಸುತ್ತದೆ. ಬಸ್ಸು ಘಟ್ಟದ ಹಾದಿಯ ಬಸ್ಸು, ಎತ್ತಿ ಕುಲುಕುವ ಬಸ್ಸಿನಲ್ಲಿ ನಿಂತು ಕಾಲುಸೋತ ನಲ್ಲೆಯ ಬೆನ್ನಿಗೆ ತನ್ನ ಬಾಹುಗಳ ಆಸರೆ ನೀಡುತ್ತಾ ಅವ ಹೇಳಿದ್ದ, 'ನಲ್ಲೆ ಈ ಹಾದಿಯಲ್ಲಿ ನೀ ಮತ್ತೆ ಬರುವೆ, ನಿಂತು ನಿಂತು ನಡೆವ ಈ ನೇತಾಡುವ ಬಸ್ಸಿನಲ್ಲಲ್ಲ. ನಮ್ಮದೇ ಬೆನ್ಜ್ ಕಾರಿನಲ್ಲಿ? ಅವ ಮಾತು ಉಳಿಸಿಕೊಂಡಿದ್ದ. ಹತ್ತು ವರ್ಷಗಳ ನಂತರ ಆಕೆ ಅದೇ ಹಾದಿಯಲ್ಲಿ ಬಂದಿದ್ದಳು. ಅವ ಕೊಂಡು ಕೊಟ್ಟ ಕಾರಿನಲ್ಲಿ, ಆದರೆ ಬಗಲಲ್ಲಿ ಅವನಿರಲಿಲ್ಲ. 'ಲಕ್ಷಾಂತರ ರೂಪಾಯಿ ಪ್ರಾಜೆಕ್ಟ್'ನಲ್ಲಿ ಮುಳುಗಿದ್ದ. ಅವ ಆ ಹಾದಿಯಲ್ಲಿ ಹೊರಟದ್ದೇ ಅವಳಿಗಾಗಿ. ಅವನ ದುಡಿಮೆಗೆ ಕೇವಲ ಅವಳ ಖುಷಿ ಗುರಿಯಾಗಿತ್ತು. ಆದರೆ ಆ ಹಾದಿಯಲ್ಲಿ ಹೆಜ್ಜೆ ಹಾಕುತ್ತಾ ಅವನ ಮೂಲ ಉದ್ದೇಶ ಎಲ್ಲೋ ಮಸುಕಾಯಿತು. ಅವಳು, ಕುಟುಂಬ, ಎಲ್ಲವೂ ನೇಪಥ್ಯಕ್ಕೆ ಸರಿದು, ಹಣಕ್ಕೆ ಹಣವೇ ಉದ್ದೇಶವಾಗಿ ಯಶಸ್ಸಿಗೆ, ಯಶಸ್ಸೇ ಗುರಿಯಾಗಿ, ತನಗೆ ತಾನೇ ಸ್ಪರ್ಧಿಯಾಗಿ ಅವ ಹೊರಟ ಬಿಡುವಿಲ್ಲದೆ, ಜೊತೆ ನಿಲ್ಲದೆ, ವಿಶ್ರಾಂತಿಗೊಳ್ಳದೆ.[೧]

ಹಣದ ವ್ಯಾಮೋಹಕ್ಕೆ ಬಲಿಯಾದಂತಹ ವ್ಯಕ್ತಿಗೆ ಪ್ರೀತಿ, ಆಧರಗಳು, ಭಾವನೆಗಳು ಬೇಕಾಗಿಲ್ಲ. ಆತನಿಗಿದ್ದುದೇ ದೊಡ್ಡಪ್ಪ, ಅದಿಲ್ಲದ ಜೀವನವನ್ನು ಆತ ಊಹಿಸಿಕೊಳ್ಳಲು ಇಷ್ಟಪಡುವುದಿಲ್ಲ. ತನ್ನ ಮಗಳಿಗೆ ಜ್ವರವಿದ್ದರೂ ಆತ ಕಛೇರಿಗೆ ಹೊರಟು ನಿಲ್ಲುತ್ತಾನೆ. ಅದೇ ರೀತಿ ಸಂಯುಕ್ತಾಳು ಕೆಲಸಕ್ಕೆ ಹೊರಟು ನಿಂತರೆ ಮಗಳನ್ನು ನೋಡಿಕೊಳ್ಳುವವರು ಯಾರು? ಆದರೆ ತಾಯಿ ಮನಸ್ಸು ಕೇಳಬೇಕಲ್ಲ. ಕೆಲಸಕ್ಕೆ ರಜೆಯಾಕಿ, ಕಛೇರಿಯ ಮುಖ್ಯಸ್ಥರಿಂದ ಬೋಯಿಸಿಕೊಂಡು ತನ್ನ ಮಗಳ ಏಳಿಗೆಗೆ ಟೊಂಕಕಟ್ಟಿ ನಿಲ್ಲುವುದು ಸ್ತ್ರೀಯ ಮಹತ್ವ ಕುಟುಂಬಕ್ಕೆ ಎಷ್ಟು ಅನಿವಾರ್ಯ ಎಂಬುದನ್ನು ತೋರಿಸುತ್ತದೆ.

**ಇತಿಹಾಸದಂಚಿನಲ್ಲಿ ಕತೆಯಲ್ಲಿನ** ತಂದೆ-ತಾಯಿ, ಮಕ್ಕಳ ಭವಿಷ್ಯದ ಬಗ್ಗೆ ಯಾವ ರೀತಿಯ ಶ್ರಮವಹಿಸುತ್ತಾರೆ, ಮಕ್ಕಳು ಎಡವಿದಾಗ ಅವರಿಗೆ ಬುದ್ಧಿಯ ಮಾತುಗಳನ್ನು ಸಂಜೀವಿನಿಯಂತೆ ತಿಳಿಯಪಡಿಸುವುದು, ಅವುಗಳ ಮುಖೇನ ಅವನ ವ್ಯಕ್ತಿತ್ವಕ್ಕೆ ಮತ್ತು ಆತನ ಭವಿಷ್ಯಕ್ಕೆ ಮಾರ್ಗದರ್ಶಕರಾಗಿ ನಿಲ್ಲುವಂತದ್ದು, ಮತ್ತು ಪ್ರಸ್ತುತ ದಿನಗಳಲ್ಲಿ ಮಕ್ಕಳು ಯಾವ ರೀತಿಯ ದುಶ್ಚಟಗಳನ್ನು ರೂಢಿಸಿಕೊಳ್ಳುತ್ತಿದ್ದಾರೆ, ಜೊತೆಗೆ

---

೧. ನೇಮಿಚಂದ್ರ, ಬದುಕು ಕಾಯುವುದಿಲ್ಲ, ಪುಟಸಂಖ್ಯೆ. ಪುಟ ಸಂಖ್ಯೆ ೮೧.

ತಾಯಿ ಒತ್ತಡಗಳ ನಡುವೆ ಮಗನ ಭವಿಷ್ಯದ ಬಗ್ಗೆ ಚಿಂತಿಸುವುದು ಮುಂತಾದ ವಿಷಯಗಳನ್ನು ಕತೆಗಾರ್ತಿ ನೇಮಿಚಂದ್ರರವರು ಸುಂದರವಾದ ಸಂಭಾಷಣೆಯ ಮೂಲಕ ಅಭಿವ್ಯಕ್ತಿಸಿದ್ದಾರೆ ಸಣ್ಣಕತೆಗಳ ಮುಖೇನ.

ಪ್ರತಿಯೊಬ್ಬ ತಂದೆತಾಯಿಗೆ ಮಹತ್ವಾಕಾಂಕ್ಷೆ ಇರುವುದು ಸಹಜ. ನಾವು ಮಾಡಲಾಗದ ಸಾಧನೆಯನ್ನು ಮಕ್ಕಳು ಸಾಧಿಸುತ್ತಾರೆಂಬ ಕನಸು ಕಾಣುವಂತಹ ಕಲ್ಪನೆಗಳು, ಮನಸ್ಸಲ್ಲಿ ರವಿಯ ಪರೀಕ್ಷೆಯ ಫಲಿತಾಂಶದ ಕಡೆಗೆ ಇದ್ದಿದ್ದು. ಏಕೆಂದರೆ ತಂದೆತಾಯಿ ಕಿರಣ್ ಮತ್ತು ಶಶಿ ಉದ್ಯೋಗದಲ್ಲಿ ಇಂಜಿನಿಯರ್‌ಗಳು, ಇದು ಸಹಜವಾಗಿ ಮಗನಲ್ಲಿಯೂ ಕೂಡ ಉತ್ತಮ ಫಲಿತಾಂಶವನ್ನು ಬಯಸಿದ್ದರು. ಆದರೆ ಎಲ್ಲೋ ಒಂದು ಕಡೆ ಶಶಿಯಲ್ಲಿ ತನ್ನ ಮಗ ರ್‍ಯಾಂಕ್ ಪಡೆಯದಿದ್ದರೂ ಪರವಾಗಿಲ್ಲ, ಆತ ಮನುಷ್ಯನಾದರೆ ಸಾಕು ಎಂಬ ಯೋಚನೆ ಆಕೆಗೆ ಕಾಡಿತ್ತು.

ಏಕೆಂದರೆ ತಾಯ್ತನ ಬಡತನದ ಬೇಗೆಯಲ್ಲಿ ಬೆಂದು ಬಂದವಳಾಗಿದ್ದಳು. ಆಕೆಗೆ ಅಪಾರವಾದ ಅನುಭವ ಆತರಹದ ಯೋಚನೆಗೆ ನಾಂದಿಹಾಡಿತ್ತು. ಕಿರಣ್‌ನು ಕೂಡ ಕಷ್ಟಪಟ್ಟು ಓದಿ ಮುಂದೆ ಬಂದಂತಹ ವ್ಯಕ್ತಿಯಾಗಿದ್ದವನು. ಶಶಿ ಹೇಳಿದ ಮಾತು "ಮನುಷ್ಯನಾದರೆ ಸಾಕು" ಎಂಬುದನ್ನು ಕಿರಣ್ ಎಲ್ಲರೂ ಮನುಷ್ಯನಾಗಿಯೇ ಹುಟ್ಟುತ್ತಾರಲ್ಲ ಎಂದಿದ್ದ. ಅದಕ್ಕೆ ಶಶಿ ಮನುಷ್ಯನಾಗಿಯೇ ಹುಟ್ಟುತ್ತಾರೆ ಆದರೆ ಮನುಷ್ಯರಾಗಿಯೇ ಬೆಳೆಯುವುದಿಲ್ಲ. ಅರಿಸ್ಟಾಟಲ್ ಒಂದು ಕಡೆ ಮಾನವ ಸಂಘಜೀವಿ, ಸಮೂಹ ಜೀವಿ ಎಂದು ಹೇಳಿರುವುದು ಮನುಷ್ಯತ್ವದ ಮಹತ್ವವನ್ನು ಆತ ಸಾರಿ ಹೇಳಿದ್ದ.



ಈ ನಿಟ್ಟಿನಲ್ಲಿ ರವಿ ಎಲ್ಲಾ ಪರೀಕಷೆಗೂ ಗೈರುಹಾಜರಿಯಾಗಿರುವುದು, ಕಿರಣ್ ಮತ್ತು ಶಶಿ ನಂಬಲಾಗದ ವಿಷಯ ಮತ್ತು ಆಶ್ಚರ್ಯವಾಗಿತ್ತು. ಸಂಪರ್ಕದ ಕೊರತೆಯಲ್ಲಿ ನಾವು ಸೋತಿದ್ದೇವಾ ಎಂಬ ಪ್ರಜ್ಞೆ ಅವರಲ್ಲಿ ಕಾಡಿತ್ತು.

ಮೊನ್ನೆ ಮೊನ್ನೆಯವರೆಗೆ ಮಡಿಲಲ್ಲಿ ಮುಖವಿತ್ತು. ರಾಜು ಗೋಲಿ ಕಿತ್ತುಕೊಂಡಿದ್ದು, ತಾನು ದೀಪುವಿನ ಕಿವಿ ಕಚ್ಚಿದ್ದು ಎಲ್ಲ ಹೇಳುತ್ತಿದ್ದ ಈ ಹುಡುಗ.... ತಟ್ಟನೆ ಅಪರಿಚಿತ, ನಾವು ಕಂಡಿರದ ಹತ್ತು ಹಲವು ಮುಖಗಳಿವೆ ನನ್ನ ಮಗನಿಗೆ.... ಅವನಿಗೀಗ ಹದಿನೇಳು.[೧]

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರ ಕತೆಗಳು, ಇತಿಹಾಸದಲ್ಲಿನ ಕತೆ, ಪು. ೮೧.

ಇಲ್ಲಿ ಅಪರಿಚಿತ ವ್ಯಕ್ತಿಯಂತೆ ಹದಿನೇಳರ ಹುಡುಗ ತಂದೆ-ತಾಯಿಗೆ ಕಾಣುತ್ತಿದ್ದಾನೆ. ಎಲ್ಲಿ ಎಡವಿದ ಎಂಬುದನ್ನು ಅರಿಯಲು ತಂದೆ-ತಾಯಿ ವಿಫಲ-ರಾಗಿದ್ದಾರೆ. ನಿರುದ್ಯೋಗಿ ಬಿ.ಇ. ಮುಗಿಸಿದ ವ್ಯಕ್ತಿಗಳ ಪರಿಚಯ ಈತನ ಭವಿಷ್ಯವನ್ನು ಹಾಳುಮಾಡಿದೆ. ಈ ನಿಟ್ಟಿನಲ್ಲಿ ಕತೆಗಾರ್ತಿ ನಿರುದ್ಯೋಗ ಸಮಸ್ಯೆಯ ಬಗೆಗೆ ಈ ಕತೆಯಲ್ಲಿ ತೋರಿಸಿರುವುದು, ಪ್ರಸ್ತುತ ಸನ್ನಿವೇಶಕ್ಕೆ ಅನ್ವಯವಾಗುವಂತದ್ದಾಗಿದೆ, ಸಾಮಾಜಿಕ ಸಮಸ್ಯೆಯು ಸಹ ಆಗಿದೆ.

"ಡಿಗ್ರಿ ತಗೊಂಡು ಏನಾಗುತ್ತೆ ನನ್ನಕಂಪ್ಯೂಟರ್ ಕ್ಲಾಸ್‌ಗೆ ಬಿ.ಇ. ಮಾಡ್ದೋರೆಲ್ಲ ಬಂದಿದ್ದರು, ಬಿ.ಇ. ಮಾಡಿಕೊಂಡು ಅವರಿಗೆ ಕೆಲಸ ಸಿಕ್ಕಿಲ್ಲ" ಮುಖ ಉಬ್ಬಿಸಿ ಹೇಳಿದ್ದ. ತನ್ನ ಬೇಜವಾಬ್ದಾರಿಗೊಂದು ಉದಾತ್ತ ಕಾರಣವನ್ನೋ, ಸಾಮಾಜಿಕ ಸಮಸ್ಯೆಯ ಹೊಸ ರೂಪವನ್ನೋ ಕೊಡಲು ಬಯಸಿದ.

"ಬಿ.ಇ. ಆದವರಿಗೆ ಕೆಲಸ ಇಲ್ಲ ಅಂದ್ರೆ ಎಸ್.ಎಸ್.ಎಲ್.ಸಿ ಮಾಡಿದೋರಿಗೆ ಸಿಗುತ್ತಾ ರವಿ? ತರ್ಕದ ಪ್ರಶ್ನೆಗಳಿಗೆ ಅವನದು ಬರೀ ಮೌನ.

"ನಾಳೆ ಉದ್ಯೋಗದ ಅವಕಾಶಗಳು ಹುಟ್ಟಿಕೊಂಡ್ರೆ ಒಂದಿಷ್ಟು ಓದಿದೋರಿಗೆ ಅವಕಾಶ ಇರುತ್ತೆ ಹೊರತು ನಿನಗಲ್ಲ" ನಿರುದ್ಯೋಗ ಸಮಸ್ಯೆ ಬಗೆಗೆ ಹಾಗೂ ಭವಿಷ್ಯದ ಚಿಂತನೆಗಳ ಬಗೆಗೆ ಅವಕಾಶಗಳ ಬಗ್ಗೆ ಕತೆಗಾರ್ತಿ ಬಿತ್ತರಿಸಿದ್ದಾರೆ.

ರವಿಯೊಡನೆ ಯಾವ ರೀತಿ ವ್ಯವಹರಿಸಬೇಕಿತ್ತು ಎನ್ನುವ ಚಿಂತನೆಯಲ್ಲಿ ಕಿರಣ್ ಮತ್ತು ಶಶಿ ಮುಳುಗಿದ್ದಾರೆ. ಹೊಡೆದು, ಬಡಿದು ಹೇಳಬೇಕಿತ್ತೆ ಅಥವಾ ನಮ್ಮ ವಿದ್ಯೆಯ ಅನುಭವದ ಸಾರವನ್ನು ಹೇಳಬೇಕಿತ್ತಾ ಎಂಬ ಪ್ರಶ್ನೆ ತಂದೆ-ತಾಯಿಯರಲ್ಲಿ ಕಾಣುತ್ತಿದೆ.

ಲೌಕಿಕದಲ್ಲಿ ಸೋತ ಅಪ್ಪ ಆಧ್ಯಾತ್ಮದ ಹೆಸರು ಹೇಳಿ ಆಶ್ರಮ ಸೇರಿದರು. ಅಂಥಾ ಆಯ್ಕೆಯ ಅವಕಾಶಗಳಿಲ್ಲದೆ ಓಡಿ ಹೋಗುವ ಮುಖೇಡಿಯೂ ಅಲ್ಲದ ನನ್ನಮ್ಮ ಕಾಲೂರಿ ನಿಂತಳು, ಅವನೆಲ್ಲ ಹೊಲಸು ಮಾತುಗಳಿಗೆ ಏಕೈಕ ಗುರಾಣಿಯಾಗಿ, ದುಡಿಯದೇ ಗಳಿಸಿದ ಪಡ್ಡೆ ಹುಡುಗನ ಹಣದ ದಾಹ, ಹಣದ ಅಗತ್ಯ ದಿನದಿಂದ ದಿನಕ್ಕೆ ಹೆಚ್ಚಿತು.

ಲೌಕಿಕದಲ್ಲಿ ನೊಂದ ಅಪ್ಪ (ಗಂಡಸು) ಹೆದರಿ ಅಧ್ಯಾತ್ಮಕ ಕಡೆ ನಡೆದುಬಿಟ್ಟರೆ ಮನೆಯಲ್ಲಿದ್ದಂತವರ ಪರಿಸ್ಥಿತಿ ಅವಲೋಕಿಸದೆ ಹೊರಟು ನಿಂತಾಗ, ಸ್ತ್ರೀಯಾದವಳು ತಾಯಿ ಕುಟುಂಬದ ಜವಾಬ್ದಾರಿಯನ್ನು ಹೊತ್ತು, ಮಕ್ಕಳ ಒಳಿತಿಗೆ ಟೊಂಕಕಟ್ಟಿ

ನಿಲ್ಲುವುದು, ಇಲ್ಲಿ ಸ್ತ್ರೀಯು ಕುಟುಂಬಕ್ಕೆ ಕಷ್ಟಕಾಲದಲ್ಲಿ ಸಂಜೀವೀಯಂತೆ ಧೈರ್ಯದಿಂದ ಕುಟುಂಬವನ್ನು ನಡೆಸುವುದು, ಎಷ್ಟೇ ಕಷ್ಟ ಬಂದರೂ ಅದನ್ನು ತಾಳ್ಮೆಯ ಮೂರ್ತಿಯಂತೆ ನಿಂತು ದಡವನ್ನು ಸೇರಿಸುವಂಥದ್ದನ್ನು ಪ್ರಸ್ತುತ ದಿನಗಳಲ್ಲಿ ಕಾಣಬಹುದಾಗಿದೆ.

ಪ್ರಯತ್ನಿಸದಿದ್ದರೆ ಗೆಲ್ಲುವುದು ಇಲ್ಲ, ಸೋಲುವುದು ಇಲ್ಲ, ಯಾವುದೇ ಸಾಧನೆಯನ್ನು ಮಾಡಬೇಕಾದರೆ ಸತತ ಪರಿಶ್ರಮ, ಸಮರ್ಪಣಾ ಮನೋಭಾವ, ಏಕಾಗ್ರತೆ, ತಲ್ಲೀನತೆ, ಇದ್ದಾಗ ಮುಳ್ಳುಗಳನ್ನು ದಾಟಿ ಗುರಿಯಡೆಗೆ ಸಾಗಬಹುದು. ಈ ದಿಸೆಯಲ್ಲಿ ತಂದೆತಾಯಿಯರು ಮಕ್ಕಳ ಜೊತೆ ಸಂಪರ್ಕದಲ್ಲಿರಬೇಕಾಗುತ್ತದೆ. ಕತೆಯಲ್ಲಿ ಡೆಮಿಂಗ್ ಅವರ ಸಿದ್ಧಾಂತಗಳನ್ನು ತಂದು ಕತೆಯ ಮಹತ್ವವನ್ನು ಇಲ್ಲಿ ತೋರಿಸಿಕೊಟ್ಟಿದ್ದಾರೆ ಕತೆಗಾರ್ತಿ.

**ನನ್ನದೆಯ ಕಥನದಲ್ಲಿ** ಎಂಬ ಕತೆಯಲ್ಲಿ ಹಿಂದಿನ ವಂಶಜರ ಬಿರುದು ಬಾವಲಿಗಳನ್ನು ಹೆಸರಿನ ಮುಂದೆ ಸೇರಿಸಿಕೊಂಡರೆ ಸಾಲುವುದಿಲ್ಲ. ಅದರಂತೆ ನಡೆಯಬೇಕಾಗುತ್ತದೆ. ಅದರಲ್ಲಿ ಜೀವನ್ ತನ್ನ ಉಳಿವಿಗಾಗಿ ೨೨ ಜನರ ಪ್ರಾಣವನ್ನು ಲೆಕ್ಕಿಸದೇ ವಿಮಾನದಿಂದ ಹಾರುವುದು, ಇವೆಲ್ಲವೂ ವೀರತನದ ಲಕ್ಷಣವಲ್ಲ.

ಮಿಹಿಕಾ ಮತ್ತು ಕಿರಣ್ ಹತ್ತು ವರ್ಷದ ದಾಂಪತ್ಯ ಜೀವನದಲ್ಲಿ ಒಂದು ಕಹಿ ಘಟನೆ, ಮನೆ ಕೆಲಸದವಳ ಜೊತೆ ಅದರಲ್ಲಿಯೂ ೧೫ರ ಹರೆಯದ ಹುಡುಗಿಯ ಜೊತೆ ಸರಸಸಲ್ಲಾಪದಲ್ಲಿ ತೊಡಗಿರುವ ಕಿರಣ್‌ನ ಕ್ರೂರತನ ಮತ್ತು ಗಂಡಸರ ದಬ್ಬಾಳಿಕೆ ಎಂದರೆ ತಪ್ಪಾಗಲಾರದು. ಈ ದಿಸೆಯಲ್ಲಿ ಮಿಹಿಕ ಹಠವಾದಿಯಾಗಿ, ಛಲವಾದಿಯಾಗಿ, ಅವನನ್ನು ಎದುರಿಸಿ ನಿಲ್ಲುವುದು ಮತ್ತು ಪ್ರಸ್ತುತ ದಿನಗಳಲ್ಲಿ ಗಂಡನಿಂದ ಹೆಂಡತಿಯಾದವಳು ಯಾವ ರೀತಿಯ ಕಷ್ಟ ಕಾರ್ಪಣ್ಯಗಳನ್ನು ಸಹಿಸಿಕೊಂಡು ಜೀವನ ಮಾಡುತ್ತಿರುವವರ ಸಂಖ್ಯೆ ಹೇಳತೀರದು.

ಬೇರೆ ಗೃಹಿಣಿಯರಂತೆ ಗಂಡನಿಗೆ ಹೆದರಿ, ತನ್ನತನವನ್ನು ಮಿಹಿಕಾ ಕಳೆದುಕೊಳ್ಳಲಿಲ್ಲ. ತನ್ನ ವಂಶದ ಬಿರುದು ಶೇರ್‌ಜಂಗ್ ಮಾನವನ್ನು ಉಳಿಸಿದ ಧೀರವಂತೆ, ಜೀವನದಲ್ಲಿ ಎಲ್ಲವೂ ಸರಿಯಿದ್ದಾಗ ಎಲ್ಲರೂ ಇರುತ್ತಾರೆ ಆದರೆ ಜೀವನದಲ್ಲಿ ಸ್ವಲ್ಪ ಎಡವಿದಾಗ ಏಕಾಂಗಿಯಾಗಿ ನಿಂತು ಹೋರಾಡಬೇಕಾಗುತ್ತದೆ ಈ ನಿಟ್ಟಿನಲ್ಲಿ ಮಿಹಿಕಾ ಏಕಾಂಗಿಯಾಗಿ ಜೀವನವನ್ನು ಎದುರಿಸಬೇಕಾಗುತ್ತದೆ. ಒಂದು ಕ್ಷಣದಲ್ಲಿ ದಶಕದ ದಾಂಪತ್ಯ ಕುಸಿದಿತ್ತು. ಪದತಲದಲ್ಲೇ ನೆಲ ಬಾಯಿ ಬಿಟ್ಟಿತ್ತು.

ಕಣ್ಣೇದುರೇ ಹೆಣವಾದ ಕನಸುಗಳು, ಕಿರಣನನ್ನು ಹೂತುಹಾಕುವಂಥಾ ಕೋಪದ ಆ ಕ್ಷಣದಲ್ಲೂ ನನ್ನದೆಂಥಾ ಚಿಂತೆ? ಎಂಬ ನೇಮಿಚಂದ್ರರ ಬರವಣಿಗೆ.

ಇಲ್ಲಿ ಅಪರಾಧ ಎಸಗಿರುವ ವ್ಯಕ್ತಿ ಗಂಡ ಕಿರಣ್. ಅಪರಾಧಿ ನಮ್ಮವನಾದೊಡನೆ ನ್ಯಾಯ ಅನ್ಯಾಯದ ನಮ್ಮ ಸಮೀಕರಣವೂ ಬದಲಾಗುವುದೇ? ಒಂದು ಕ್ಷಣದ ಸುಖಕ್ಕಾಗಿ ಕುಟುಂಬವೆಂಬ ಸಂಸಾರವನ್ನು ಬದಿಗೆ ಸರಿಸುತ್ತಾನೆ.

ಗಂಡ ಏನೇ ತಪ್ಪು ಮಾಡಿದರೂ ಭಾರತೀಯ ಸ್ತ್ರೀಯರ ಧೋರಣೆ ಬದಲಾಗುವುದಿಲ್ಲ. ಪತಿ ಪರಮೇಶ್ವರ ಈಶ್ವರನೆಂದು ಪೂಜಿಸುವ ಪುಣ್ಯ ಭೂಮಿಯಲ್ಲಿ ಸ್ತ್ರೀಯರಿಗೆ ಕ್ಷಮೆ ಇರುತ್ತವೆ.

ಒಂದು ಕ್ಷಣದ ನಿರ್ಣಯದಲ್ಲಿ ಸೋಲು ಗೆಲುವಿನ ಇತ್ಯರ್ಥವಿರುತ್ತದೆ. ಜೀವನ್ ಧೈರ್ಯಶಾಲಿ ವ್ಯಕ್ತಿಯಾಗಿದ್ದರೂ ಸಹ ವಿಮಾನದಲ್ಲಿರುವ ವ್ಯಕ್ತಿಗಳನ್ನು ಬದುಕಿಸದೇ ಜೀವಕ್ಕೆ ಹೆದರಿ ವಿಮಾನದಲ್ಲಿದ್ದವರನ್ನು ಬಿಟ್ಟು ಕೆಳಗೆ ನೆಗೆಯುವಂತದ್ದು. ಇಲ್ಲಿ ಅವನ ವ್ಯಕ್ತಿತ್ವದ ಇನ್ನೊಂದು ಮುಖವನ್ನು ಕಾಣಬಹುದು.

ಜೀವನದಲ್ಲಿ ನಮ್ಮ ಸಮಸ್ಯೆಗಳಿಗೆ ನಾನೇ ಪರಿಹಾರ ಕಂಡುಕೊಳ್ಳಬೇಕಾಗುತ್ತದೆ.

**ಬದುಕು ನಿನ್ನಲ್ಲೆಂಥಾ ಮುನಿಸು** ಕತೆಯಲ್ಲಿ ಕ್ಯಾನ್ಸರ್ ರೋಗಕ್ಕೆ ತುತ್ತಾದ ಶಶಿ ಪಡುವಂತಹ ವ್ಯಥೆ. ಇದು ಮಧ್ಯಮವರ್ಗದ ಅದರಲ್ಲಿ ಬಡಜನರ ಮೇಲೆ ಬೀರುವಂತಹ ಪರಿಣಾಮ ಮುಂತಾದವುಗಳನ್ನು ಚಿತ್ರಿಸಿದ್ದಾರೆ.

ಪತ್ನಿಯ ಕ್ಯಾನ್ಸರನ್ನು ಗುಣಪಡಿಸಲು ಗಂಡನಾದವನು ಪಡುವಂತಹ ಕಷ್ಟ ವ್ಯಥೆ ಪತಿಯಲ್ಲಿರಬೇಕಾದ ಎಲ್ಲ ಸ್ಥೈರ್ಯಗಳು ಇದ್ದುದ್ದು ಅದರಲ್ಲಿ ಯಶಸ್ವಿಯಾದದ್ದು ಒಂದು ಅದ್ಭುತವೇ ಸರಿ.

ಶಶಿಯಲ್ಲಿ ಇರುವಂತಹ ಸಂಕುಚಿತ ಭಾವನೆ ದೂರವಾಗಿ ಕ್ಯಾನ್ಸರ್‌ನಿಂದ ಎದ್ದು ಬಂದಿದ್ದು, ಇವತ್ತಿನ ದಿನಗಳನ್ನು ಸಂತೋಷದಿಂದ ಕಳೆದಿದ್ದು ಒಂದು ಅಮೋಘನೀಯ ಎಂದು ಹೇಳಬಹುದು,

ಸಾವು ನೀ ಬರುವುದಾದರೆ ನಾಳೆ ಬಾ ಇಂದು ಬದುಕಲು ಬಿಡು ಎಂಬ ನೇಮಿಚಂದ್ರರ ವಾಕ್ಯಗಳು ಈ ಜೀವನದಲ್ಲಿ ನಾಡಿಮಿಡಿತವನ್ನು ಬಡಿದೆಬ್ಬಿಸುತ್ತವೆ. ಮತ್ತು ಅರ್ಥಗರ್ಭಿತವಾಗಿವೆ.

**ನಿನ್ನೆಗಳ ಹೊರೆ ಇಳಿಸಿ** ಕತೆಯಲ್ಲಿ ಮಧ್ಯಮ ವರ್ಗದ ಕುಟುಂಬದ ವಿಷಯವನ್ನು ಈ ಕತೆಯಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ಗಂಡ ಹೆಂಡತಿ ಕಛೇರಿ ಕೆಲಸಕ್ಕೆ ಹೋಗುವುದರ ಜೊತೆಗೆ ಹೊರಗಿನ ಮತ್ತು ಒಳಗಿನ ಸಂಬಂಧವನ್ನು ಗಟ್ಟಿಗೊಳಿಸುವಲ್ಲಿ ಪಡುವಂತಹ ಶ್ರಮ ಅದರಲ್ಲೂ ವಿಜಿ ಬೆಳಗ್ಗೆ ಎದ್ದು ತಿಂಡಿ, ಕಾಫಿ ತಯಾರಿಸಿ ಗಂಡ ಮತ್ತು ಮಕ್ಕಳಿಗೆ ಕೊಟ್ಟು ತಾನು ರೆಡಿಯಾಗಿ ಕಛೇರಿಗೆ ಹೋಗುವುದು, ಅಷ್ಟೊಂದು ಸುಲಭದ ವಿಷಯವಾಗಿರಲಿಲ್ಲ. ಜೊತೆಗೆ ಹಿಂದಿನ ಮತ್ತು ಇಂದಿನ ಜನರ ಸಂಪ್ರದಾಯ, ಆಚಾರ-ವಿಚಾರಗಳನ್ನು ಎತ್ತಿ ತೋರಿಸಿದ್ದಾರೆ. ಸೀತಾಬಾಯಿಯ ಮೊಮ್ಮಕ್ಕಳೆಲ್ಲ ಈಗ ಕೆಲಸ ಮಾಡಿಕೊಂಡು ಮಧ್ಯರಾತ್ರಿ ಕ್ಯಾಬ್‌ನಿಂದ ಇಳಿಯುತ್ತಿದ್ದಾಳೆ, ಕಿರಿಯವಳು ರ್‍ಯಾಂಪ್ ಮೇಲೆ ನಡೆದಾಡುತ್ತಾ ರೂಪದರ್ಶಿಯಾಗುವ ಕನಸು ಕಾಣುತ್ತಿದ್ದಾಳೆ. ಸಂಪಿಗೆಮರ, ಮಾವಿನ ಮರ, ಬೇವಿನ ಮರಗಳಲ್ಲಿ ನೆಲಸಮವಾಗಿವೆ.

ನಾವು ಎಲ್ಲೋ ಒಂದುಕಡೆ ಆಧುನಿಕತೆ, ವೈಜ್ಞಾನಿಕವಾಗಿ ಮುಂದುವರಿದಷ್ಟು ನಮ್ಮ ಆಚಾರ-ವಿಚಾರಗಳನ್ನು ರೂಢಿ ಸಂಪ್ರದಾಯಗಳನ್ನು, ಭಾವನೆಗಳನ್ನು, ಸಂಬಂಧಗಳನ್ನು ಕಳೆದುಕೊಳ್ಳುತ್ತಿದ್ದೇವೇನೋ ಎಂಬ ಭಯ ಕತೆಗಾರ್ತಿಯಲ್ಲಿ ಕಾಡುತ್ತಿದೆ. ಜೊತೆಗೆ ಪ್ರಸ್ತುತ ವಿಷಯಗಳಲ್ಲಿಯೂ ನಾವು ಪಾಶ್ಚಿಮಾತ್ಯ ಸಂಸ್ಕೃತಿಗೆ ಅಲ್ಲಿನ ರೂಢಿಗಳಿಗೆ ಮಾರುಹೋಗುತ್ತಿದ್ದೇವೆ.

ಹಿಂದಿನ ಕಾಲದಲ್ಲಿ ಭಾವನೆಗಳಿಗೆ, ಸಂಬಂಧಗಳಿಗೆ ಬೆಲೆಯಿತ್ತು. ಹೆಂಗಸರು ಹೊರಕಟ್ಟೆಯ ಮೇಲೆ ಕುಳಿತು ಸಂಜೆ ಹರಟುವಂತಹದ್ದು, ಮಕ್ಕಳು, ಲಗೋರಿ, ಚಿನ್ನಿದಾಂಡು, ಗೋಲಿ, ಬುಗುರಿ, ಮರದ ಕೋತಿ ಆಟಗಳು, ದೇಶಿಯ ಆಟಗಳನ್ನು ಹಾಡುತ್ತಿದ್ದರು.

ಈಗ ಬದಲಾಗಿದೆ. ಕಂಪ್ಯೂಟರ್, ಲ್ಯಾಪ್‌ಟಾಪ್, ಟಿವಿ ಮನೆಯ ಒಳಗಡೆ ಇವುಗಳ ಮುಂದೆ ಕುಳಿತು ಗೇಮ್ ಆಡುವುದು ಸಾಮಾನ್ಯವಾಗಿದೆ. ದೈಹಿಕವಾಗಿ ಮತ್ತು ಮಾನಸಿಕವಾಗಿ ಮಕ್ಕಳು ಕುಗ್ಗುತ್ತಿದ್ದಾರೆ. ಸಂಬಂಧಗಳಿಗೆ, ಭಾವನೆಗಳಿಗೆ ಬೆಲೆ ಇಲ್ಲದಂತಾಗಿದೆ. ಜಾಗತೀಕರಣದಿಂದ ಜಗತ್ತು ಕುಗ್ಗಿದೆ.

ಮನುಷ್ಯ ಸಂಬಂಧಗಳೆಲ್ಲ ಬದಲಾಗಿದೆ. ದೇವರೊಡನೆಯ ಸಂಬಂಧ ಮೊದಲಿನ ತೀವ್ರತೆಯಿಂದ ಕೂಡಿಲ್ಲ. ಕಾಂಪೌಂಡಿನ ಉದ್ದಕ್ಕೆ ಉಚ್ಚೆ ಹುಯ್ಯುವ ಜಾಗದಲ್ಲಿ ದೇವರ ಚಿತ್ರವನ್ನು ಬಿಡಿಸಿ, ಈಗಲಾದರೂ ಹೊಲಸು ಮಾಡದಿರಲಿ' ಎಂಬ ಬರೆಯುವ ಪ್ರಕಟಣೆಗಳನ್ನು ನಾವಿಂದು ನೋಡಬಹುದಾಗಿದೆ. ಪ್ರತಿಯೊಬ್ಬರ ಮನೆಯಲ್ಲಿ ಕಾರುಗಳು, ವಾಕಿಂಗ್‌ಗೆ ಜಾಗವಿಲ್ಲದಷ್ಟು ನಾಯಿಕೊಡೆಯಂತೆ ತಲೆಎತ್ತಿವೆ.

ತಳ್ಳುವ ಗಾಡಿಯಲ್ಲಿ ತರಕಾರಿಯನ್ನು, ಸೊಪ್ಪುಗಳು ತೆಗೆದುಕೊಳ್ಳುತ್ತಿದ್ದವರು, ಫ್ರಿಜ್ ಗಳಿಗೆ ಮಾರುಹೋಗಿದ್ದೇವೆ ಇಲ್ಲಿ ಖಾಸಾಗೀಕರಣ, ಜಾಗತೀಕರಣದ ಅಂಕುರವನ್ನು ತೋರಿಸುತ್ತದೆ.

ಕ್ಷಣಿಕ ಬದುಕಿನಲ್ಲಿ ಭಾವನೆಗಳು, ಸಂಬಂಧಗಳಿಗೆ ಬೆಲೆಯಿಲ್ಲದಂತಾಗಿದೆ. ಶಾಶವತವಾದ ಸಿಟ್ಟು ಸೆಡವು ಮುನಿಸುಗಳು ತುಂಬಿ ತುಳುಕುತ್ತಿವೆ.

"ಕಾಯ್ದುಕೊಳ್ಳುವ ಸಂಬಂಧಗಳು ಸದಾ ಆಸ್ಫೋಟಿಸಬಲ್ಲವು, ಸುಡುವ ಬೆಂಕಿಯಾಗಿ. ಒಣಹುಲ್ಲು ಮೆದೆಯಾಗಿ, ಸಣ್ಣ ಕಡ್ಡಿ ಗೀರಿದರೂ ಸಾಕು ಸ್ಫೋಟಿಸಿ ಕಾಡ್ಗಿಚ್ಚಾಗಬಲ್ಲವು, ಕಾಯ್ದುಕೊಳ್ಳವ ಸಂಬಂಧಗಳು ನನ್ನ ಕಿರಣನ ನಡುವೆ, ಅಪ್ಪ ಮಕ್ಕಳ ನಡುವೆ, ಅಣ್ಣ ತಂಗಿಯರ ನಡುವೆ, ಅದರಾಚೆಗೆ ಮನುಷ್ಯ ಮನುಷ್ಯನ ನಡುವೆ, ಜಾತಿ ಜಾತಿಗಳ ನಡುವೆ, ಧರ್ಮ ಧರ್ಮಗಳ ನಡುವೆ, ಮಾತಾಗದ ಸಂವಾದವಿಲ್ಲದ ಸಂಬಂಧಗಳು ಎದೆಯಲ್ಲಿ ಹಗೆಯಾಗಿ, ಕುದಿದ ಹಬೆಯಾಡುತ್ತವೆ, ಸಿಡಿಯುತ್ತವೆ ಮೂಲೆ ಮೂಲೆಗಿಟ್ಟ ಬಾಂಬುಗಳಾಗಿ." ಹಿಂದಿನ ಕಹಿ ನೆನಪುಗಳನ್ನು ಭವಿಷ್ಯದ ಬಗ್ಗೆ ಚಿಂತಿಸುತ್ತಾ ಹೋಗುವುದು ವಿಜಿ ಮತ್ತು ಕಿರಣ್‌ನಲ್ಲಿ ಗೋಚರಿಸುವಂತಹ ಅಂಶ. ನಿನ್ನೆಗಳ ಹೊರೆ ಇಳಿಸಿ ಹೊರಟಿದ್ದೆವು, ನಾಳೆಗಳಿಗೆ ಕಾಲಿಟ್ಟು.

**ನೀನಿರುವೆ ನಮ್ಮೊಡನೆ** ಎಂಬ ಕತೆಯಲ್ಲಿ ರವಿಯನ್ನು ಉಳಿಸಿಕೊಳ್ಳಲು ಚರಿತ ಶ್ರಮಪಟ್ಟ ರೀತಿ, ಅವಳ ಆತಂಕ, ದುಗುಡ, ದುಮ್ಮಾನಗಳು ಅಭಿವ್ಯಕ್ತವಾಗಿವೆ. ರವಿಯನ್ನು ಕಳೆದುಕೊಂಡರು, ಚರಿತ ಸಿದ್ಧವಾಗಿದ್ದಳು ಎಲ್ಲದಕ್ಕೂ. ಇದು ಅನಿವಾರ್ಯತೆಯು ಕೂಡ.

ಸಾವೇ ಕೊಂಚ ನಿಲ್ಲು ನಿನ್ನ ಮಾತನಾಡಬೇಕು. ನನ್ನ ಮನಸ್ಸಿನ ವಿಷಯಗಳನ್ನು ಅಂತರಮಗದ ಮಿಡಿತಗಳನ್ನು ಹೇಳಬೇಕು ಎಂದು ಪರಿತಪಿಸುತ್ತಿದ್ದಾಳೆ ಚರಿತ.

ಸ್ತ್ರೀ ತನ್ನ ಪತಿಯನ್ನು ಉಳಿಸಿಕೊಳ್ಳಲು ಪಡುವಂತಹ ಶ್ರಮ ಈ ಕತೆಯಲ್ಲಿ ಕತೆಗಾರ್ತಿ ಚಿತ್ರಿಸಿದ್ದಾರೆ. ಆಸ್ಪತ್ರೆಗೆ ಬೇಕಾದಂತಹ ಸಣ್ಣ ಸಣ್ಣ ಚೀಲ ತಯಾರಿಸಿಕೊಂಡಳು, ಅಡುಗೆ ಬಟ್ಟೆ ಮನೆಯ ಎಲ್ಲ ಕೆಲಸವನ್ನು ಮುಗಿಸಿ ಪುಟ್ಟಿಯನ್ನು ಲಾಲಿಸಿ ಇಲ್ಲಿ ತಾಯಿಯಾಗಿ, ಪತ್ನಿಯಾಗಿ ಹಗಲಿರುಳು ಓಡಬೇಕಿತ್ತು ಸಮಸ್ಯೆಗಳ ವಿರುದ್ಧ.

ಮನೆಯ ಬಳಿಯ ಪಾರ್ಕಿಗೆ ಹೋಗಿ ಕುಳಿತ್ತಿದ್ದಾಳೆ ಚರಿತ, ಪುಟ್ಟಿ ಆಡತೊಡಗಿದಳು, ಎಷ್ಟು ದಿನವಾಗಿತ್ತು ಇಂತಹ ಸುಂದರ ಸಂಜೆ ಆಟವಾಡುತ್ತಾ ಪ್ರಕೃತಿಯ ಸೊಬಗನ್ನು ಸವಿಯುತ್ತ ಎಂಬ ಚಿಂತೆಯಲ್ಲಿ ಕಛೇರಿಯ ನಾಲ್ಕು ಗೋಡೆಗಳ ಮಧ್ಯೆ ಇಂತಹ ಸುಮದರ ಸಂಜೆಯನ್ನು ಕಳೆಯುತ್ತಿದ್ದೆ. ಇದು ಅನಿವಾರ್ಯವೂ ಆಗಿತ್ತು. ಏಕೆಂದರೆ ಹೆಚ್ಚಿನ ದುಡಿಮೆ ಮತ್ತು ಸಂಬಳದಿಂದ ಕುಟುಂಬದ ಜೊತೆಗೆ ರವಿಯನ್ನು ಉಳಿಸಿಕೊಳ್ಳಬೇಕೆಂಬ ಹಂಬಲ ಅವಳನ್ನು ಕೆಲಸದಲ್ಲಿ ಮುಳುಗಿಸಿತ್ತು.

"ರವಿ ಮೊದಲು, ನಾನು ಬಯಸಿದ್ದೆ ನೀನು ಉಳಿಯಬೇಕು, ನನಗೆ ಸದಾ ಆಸರೆಯಾಗಿ, ಮತ್ತೆ ಬಯಸಿದ್ದೆ ನೀನು ಸಂಪೂರ್ಣ ಗುಣವಾಗಬೇಕೆಂದು, ಮೊದಲಿನಂತಾಗಬೇಕೆಂದು, ನಂತರ ಬಯಸಿದ್ದೇ ನೀನು ಹೇಗಿದ್ದರೂ ಸರಿ ಅಂಗವಿಕಲನಾದರೂ ಚಿಂತೆ ಇಲ್ಲ, ನಿನ್ನ ಜೀವ ಉಳಿಯಬೇಕೆಂದು, ಈಗ ಬಯಸುತ್ತಿದ್ದೇನೆ ರವಿ, ಸಾವು ಬದುಕಿನ ನಡುವೆ ತೂಗಾಡುತ್ತಿರುವ ಈ ನೋವಿನ ಸೇತುವೆ ದೀರ್ಘವಾಗದಿರಲಿ ಎಂದು" ವ್ಯಕ್ತಿ ಸಾಯುತ್ತಾನೆ ಎಂಬುದು ಸುಳ್ಳು, ಅವನ ಚಿಂತನೆಗಳು, ವಿಚಾರಗಳು, ಅವನಿತ್ತ ಪ್ರೀತಿ, ದ್ವೇಷ ಎಲ್ಲವೂ ಸಮಯದ ಸರಹದ್ದಿನಾಚೆ ಸಾವಿನ ಪರಿಧಿಯಾಚೆಯೂ ನಮ್ಮ ನಡುವೆ ಉಳಿದೂ ಬಿಡುತ್ತದೆ ಎಂಬ ನೇಮಿಚಂದ್ರರ ಮಾತುಗಳು ಪ್ರಮುಖವಾದವುಗಳಾಗಿವೆ.

ಸಾವಿನೊಡನೆ ಎಲ್ಲವೂ ಮುಗಿಯುವುದಿಲ್ಲ, ಕೊಟ್ಟ ಪ್ರೀತಿಯ ಅಮೂಲ್ಯವಾದ ಗಳಿಗೆಗಳು, ನೆನಪುಗಳು, ಮನಸ್ಸಿನಲ್ಲಿ ಹಸಿರಾಗಿ ಉಳಿದುಬಿಟ್ಟಿವೆ, ನೀನಿರುವೆ ನಮ್ಮೊಡನೆ ನನ್ನ ಮನಸ್ಸಿನ ದಾರಿಯ ಉದ್ದಕ್ಕೂ ಮತ್ತು ಬದುಕಿನ ಜೀವನದ ಪ್ರತಿ ಕ್ಷಣದಲ್ಲಿ ಸ್ಫೂರ್ತಿಯ ಚಿಲುಮೆಯಾಗಿ ನೀನಿರುವೆ ನಮ್ಮೊಡನೆ.

**ನೆನಪಿನಂಗಳದಲ್ಲಿ ನೂರು ಚಿತ್ತಾರ** ಕತೆಯಲ್ಲಿ ಹದಿಹರೆಯದ ಹುಡುಗಿಯರು ಕಾಣುವ ಆಸೆಗಳು, ಕನಸುಗಳು, ಹುಡುಗರಿಗೆ ಆಕರ್ಷಿತವಾಗುವಂತದ್ದು. ತಾಯಿಯಾದವಳು ಹದಿಹರೆಯದ ಹುಡಿಗಿಯ ಜೊತೆ ಸ್ನೇಹಿತೆಯಂತೆ ಬೆರೆತು ಭಯವನ್ನು ಹೋಗಲಾಡಿಸಿ ಭವಿಷ್ಯದ ಬಗ್ಗೆ ಚಿಂತಿಸುವಂತೆ ಮಾಡುವುದು, ಪ್ರಸ್ತುತ ದಿನಗಳಲ್ಲಿ ತಾಯಿಯಾದವರು ಮಾಡಬೇಕೆಂಬುದನ್ನು ನೇಮಿಚಂದ್ರರವರು ತುಂಬಾ ಸೊಗಸಾಗಿ ಬರೆದಿದ್ದಾರೆ.

ಅದೆಷ್ಟು ಹೃದಯಗಳನ್ನು ದಾಟಿ ನಮ್ಮ ಗುರಿಯನ್ನು ಉದ್ವೇಗವೆಂಬ ಗೂಡಿಗೆ ತಲುಪುತ್ತೇವೆ. ಪ್ರೀತಿಗೆ ಕಣ್ಣಿಲ್ಲವೆನ್ನುತ್ತಾರೆ. ಕಿವುದು ಕೂಡ, ಹದಿಹರೆಯರಲ್ಲಿ ಹುಕ್ಕುವಂತಹ ಪ್ರೀತಿ, ಪ್ರೇಮವೆಂಬ ಉದ್ವಿಗ್ನಗಳಿಗೆ ಬಿದ್ದು ಎಷ್ಟು ಹದಿಹರೆಯದ

ಹುಡುಗಿಯರ ಜೀವನ ಹಾಳಾಗಿ ಹೋಗಿರುವುದನ್ನು ನೋಡಬಹುದು. ಈ ದಿಸೆಯಲ್ಲಿ ನೇಮಿಚಂದ್ರರವರ ನೆನಪಿನಂಗಳದಲ್ಲಿ ನೂರು ಚಿತ್ತಾರ ಕತೆಯ ಮೂಲಕ ಹದಿಹರೆಯದವರ ಜೊತೆ ತಂದೆ-ತಾಯಿ ಅದರಲ್ಲೂ ತಾಯಿ ವಹಿಸಬೇಕಾದ ಪಾತ್ರವನ್ನು ಯಶಸ್ವಿಯಾಗಿ ತಮ್ಮ ಬರವಣಿಗೆಯ ಮೂಲಕ ಅಭಿವ್ಯಕ್ತಿಸಿದ್ದಾರೆ.

ಆಸ್ತಿ, ಅಂತಸ್ತು, ಉದ್ಯೋಗ, ಡಿಗ್ರಿ ಇವುಗಳಿಗೆ ತೂಗಿ ನೋಡುವಂತಹ ಪ್ರಕ್ರಿಯೆ ಇಂದು ನಡೆಯುತ್ತಿದೆ. ವ್ಯಾವಹಾರಿಕ ಸಂಬಂಧಗಳಿಗೆ ಪ್ರೀತಿ ಮನಸ್ಸು, ಭಾವನೆಗಳನ್ನು ಅರ್ಥಮಾಡಿಕೊಳ್ಳಲಾಗುತ್ತಿಲ್ಲ. ಪ್ರೀತಿಯಲ್ಲಿ ಜೀವನವನ್ನು ವಿಸ್ತರಿಸುವ ಶಕ್ತಿ ಇದೆ, ಮತ್ತು ಸಾವಿನತ್ತ ಕರೆದುಕೊಂಡು ಹೋಗುವಷ್ಟು ಕಠಿಣತೆಯೂ ಕೂಡ ಇದೆ.

ಈ ದಿಸೆಯಲ್ಲಿ ತಾಯಿ ಅವಳ ಭೂತಕಾಲದ ಘಟನೆಗಳನ್ನು ತೋರಿಸುತ್ತಾ ವಿವರಿಸಿದಾಗ ಬೇಬಿಗೆ ಅರಿವಾಗುತ್ತದೆ. ಅನುಭವಗಳನ್ನು ತೋರಿಸುವುದರ ಜೊತೆಗೆ ಅಭಿವ್ಯಕ್ತಿಸುವಿಕೆಯಲ್ಲಿ ಅವರಲ್ಲಿರುವಂತಹ ಉದ್ವಿಗ್ನತೆಗಳನ್ನು ಹೋಗಲಾಡಿಸಿ ಒಳ್ಳೆಯ ವ್ಯಕ್ತಿತ್ವವನ್ನು ಇವುಗಳ ಮುಖೇನ ಬೆಳೆಸಬಹುದು.

ಯೌವ್ವನದ ಬಣ್ಣಗಳಿಗೆ ಕುರುಡಾಗಬೇಕಿಲ್ಲ, ಈ ಭಾವನೆಗಳನ್ನು ಬಿಡು ಅವು ಕುಣಿದು ಕುಪ್ಪಳಿಸುವಷ್ಟು. ಆದರೆ ಯಾವುದೇ ನಿರ್ಧಾರದ ಹಗ್ಗದಲ್ಲಿ ಬಿಗಿದು ಕಟ್ಟಬೇಡ, ಕೊಂಚತಾಳು ಸಮಯವಿದೆ ಬಹಳಷ್ಟು ಇವೆಲ್ಲಕ್ಕೂ, ಆದರೆ ಸಮಯವಿಲ್ಲ ಮತ್ತೆ ಈ ಹಾದಿಯ ಪರೀಕ್ಷೆಗಳನ್ನು ಎದುರಿಸಲು...." ನಾ ಹೇಳುತ್ತಿದ್ದಂತೆ ತಟ್ಟನೆ ತಲೆ ಕೊಡವಿ ಬೇಬಿ ನಕ್ಕುಬಿಟ್ಟಳು, ಏಯ್ ಬೋರು ಹೊಡೆಸಬೇಡ ಬಿಡಮ್ಮ, ಮತ್ತು ಮನು ಏನೇ ಈಗಷ್ಟು ಚಂದ ಕಾಣೋಲ್ಲ ತಾಯಿಯಾದವಳು ತನ್ನ ಮಗಳ ವಯಸ್ಸಿಗೆ ತಕ್ಕಂತೆ ಅನುಭವದ ಮಜಲುಗಳನ್ನು ತಿಳಿಹೇಳಿದಾಗ ಮಕ್ಕಳ ಸಾರ್ಥಕತೆಯ ಬದುಕಿಗೆ ಅಂಕುರವಾಗುತ್ತದೆ.

**ಕಳೆಯಬೇಕಿದೆ ನಿನ್ನ ಜೊತೆಯಲ್ಲಿ ಒಂದು ಶ್ಯಾಮಲ ಸಂಜೆ ಕತೆಯಲ್ಲಿ**

ಕಲೆಯಬೇಕಿದೆ ನಿನ್ನ ಜೊತೆಯಲಿ
ಒಂದು ಶ್ಯಾಮಲ ಸಂಜೆ
ಬಾನು ಭುವಿಗಳ ಬಣ್ಣ ಬೆರೆಯುತ
ಒಂದು ಮೋಹಕ ಸಂಜೆ
ಕನಸು ನನಸಿನ ನಡುವಿನಂಚನು

ಅಳಿಸಿ ಹಾಕುವ ಸಂಜೆ
ಎದೆಯ ನೋವಿಗೆ ಕದವ ಹಾಕದೆ
ತೆರೆದು ತೋರುವ ಸಂಜೆ
ಕಣ್ಣ ಕತೆಗಳ ಬಿಡಿಸಿ ಹೇಳುವ
ಒಂದು ಕೋಮಲ ಸಂಜೆ
ನನ್ನ ನೋವಿನ ಅಂತರಾಳಕೆ
ನೀನು ಜಿಗಿಯುವ ಸಂಜೆ
ಹಿಡಿದು ಕೈಯನು ಬದುಕಿನೀಚೆಗೆ
ಎಳೆವ ಸಾಧ್ಯದ ಸಂಜೆ[೧]

ನೆನಪಾಗಿತ್ತು ಹಿಂದಿನ ನೆನಪುಗಳ ಕ್ಷಣಗಳು, ಕುಂಟೆಬಿಲ್ಲೆ ಆಡಿದ ದಿನಗಳು, ಅಳುಗುಳಿಮನೆಯಾಡಿದ್ದು, ಸೂರ್ಯನಿಗೆ ಎದುರಾಗಿ ಗಮಟೆಗಟ್ಟಲೆ ಹರಟೆ ಹೊಡೆಯುತ್ತಿದ್ದ ಕ್ಷಣಗಳು ಆದರೆ ಈಗ ಒತ್ತಡದ ಕೆಲಸದ ನಡುವೆ ಎಲ್ಲವನ್ನು ಮರೆತಿದ್ದೇವೆ.

ಸಂಪ್ರದಾಯ ಕುಟುಂಬದಿಂದ ಬಂದಂತಹ ಅಹಲ್ಯ ಯಾವ ರೀತಿಯ ಕಷ್ಟಗಳನ್ನು ದುಃಖಗಳನ್ನು ಎದುರಿಸಬೇಕಾಯಿತು ಇದಕ್ಕೆಲ್ಲ ಕಾರಣ ಸಮಾಜ, ಗಂಡ, ತಂದೆ–ತಾಯಿ.

ಅಹಲ್ಯೆಯ ಬದುಕು ಒಂದು ಹೆಣ್ಣಿನ ಬದುಕು ಗಂಡನಿಂದ ವಿಚ್ಛೇದನ ಪಡೆದಂತವರ ದುಃಖದುಮ್ಮಾನಗಳ, ಕಷ್ಟಗಳನ್ನು ಅಹಲ್ಯ ಅನುಭವಿಸಿದಳು. ಇಲ್ಲಿ ಅಹಲ್ಯಗೆ ಆದಂತಹ ಅವಮಾನ ಹೆಣ್ಣಿಗೆ ಅವಮಾನ ಮಾಡಿದಂತೆ.

ಅವನ ಪೂರ್ವಪರ ತಿಳಿದಿದ್ದರೂ ತಂದೆತಾಯಿ ಅವನಿಗೆ ಮದುವೆ ಮಾಡಿ ಕೊಡುವುದು, ಇದು ಮೊದಲು ತಪ್ಪು, ಇಲ್ಲಿ ಹೆಣ್ಣನ್ನು ವಿದ್ಯಾವಂತೆಯಾಗಿ ಮಾಡುವುದು ಜೊತೆಗೆ ಗಂಡನ ಅಯ್ಕೆಯಲ್ಲಿ ಸ್ವತಂತ್ರಳಾಗಿ ಚಿಂತಿಸುವುದಕ್ಕೆ ತಂದೆ–ತಾಯಿ ಅವಕಾಶ ಮಾಡಿಕೊಡಬೇಕು. ಈ ದಿಶೆಯಲ್ಲಿ ಸಮಾಜ ನೋಡುವ ದೃಷ್ಟಿಕೋನ ಬದಲಾಗಬೇಕು.

ಎಷ್ಟೋ ಹೆಣ್ಣುಮಕ್ಕಳು ನೋವುಗಳನ್ನು ಮರೆಮಾಚಿ ನಗುವುದನ್ನು ನೋಡಬಹುದು. ಕಾರಣ ಸಮಾಜ, ಎಲ್ಲ ನಮ್ಮ ಆಂತರಿಕ ಕಚ್ಚಾಟಗಳು, ವಿಷಯಗಳು

೧. ನೇಮಿಚಂದ್ರ, ಇಲ್ಲಿಯವರೆಗಿನ ನೇಮಿಚಂದ್ರರ ಕತೆಗಳು, ಪುಟ ಸಂಖ್ಯೆ ೮೧.

ಸಮುದಾಯಕ್ಕೆ, ಸಮಾಜಕ್ಕೆ ಗೊತ್ತಾಗಿ ಬಿಡುತ್ತದೋ ಎಂಬ ಭಯ ಹೆಂಗಸರಲ್ಲಿ ಸಜಹವಾಗಿ ಕಾಡುತ್ತಿರುವ ಸಮಸ್ಯೆ. ಈ ನಿಟ್ಟಿನಲ್ಲಿ ಹೆಣ್ಣು ವಿದ್ಯಾವಂತೆಯಾಗಿ ಪ್ರಬಲವಾಗಿ ಪ್ರತಿಭಟಿಸುವ ಶಕ್ತಿಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ.

ರವಿ ತನ್ನ ಸಹದ್ಯೋಗಿಯೊಂದಿಗೆ ಪ್ರೀತಿಯನ್ನು ಬೆಳೆಸಿದ್ದುದು ತನ್ನ ಮಡದಿ ಅಹಲ್ಯೆಯೊಂದಿಗೆ ನಡೆದುಕೊಂಡಂತಹ ರೀತಿನೀತಿಗಳು ಭಾರತೀಯ ಸಂಸ್ಕೃತಿಗೆ ಆಚಾರ–ವಿಚಾರಗಳಿಗೆ ವಿರುದ್ಧವಾದವುಗಳಾಗಿವೆ. ಈ ದಿಸೆಯಲ್ಲಿ ಪುರುಷರು ಸಮುದಾಯ ಮತ್ತು ಸಮಾಜ ಈ ನಿಟ್ಟಿನಲ್ಲಿ ಚಿಂತನೆ ಮಾಡುವುದು ಅನಿವಾರ್ಯ ಮತ್ತು ಮುಖ್ಯವೆನಿಸಿದೆ.

ಹುಡುಗನ ಪೂರ್ವಾಪರ ತಿಳಿದೂ ಕೊಟ್ಟ ನಿನ್ನಮ್ಮ ನಿನ್ನಪ್ಪ ಕಾರಣ. ಹಿರಿತನದ ಚಿತ್ತ ಹಿಡಿದು ಒತ್ತಾಯದ ಮದುವೆ ಮಾಡಿದ ನಿನ್ನ ಮಾವ ಕಾರಣ. ಅಪ್ಪನೆದುರು ಬಾಯಿ ಬಿಡದೆ ತನ್ನ ಪ್ರೀತಿಗೆ ಜೊತೆ ನಿಲ್ಲದೆ ನಿನ್ನನ್ನು ಅಂದು ಕಟ್ಟಿಕೊಂಡು, ಇಂದು ಬಿಟ್ಟಿರುವ ನಿನ್ನ ಹೇಡಿ ಗಂಡ ಕಾರಣ. ಅವರಿವರ ಸರ್ವ ತಪ್ಪುಗಳನ್ನು ತನ್ನದೆಂದು ಪಾಪಪ್ರಜ್ಞೆಯಿಂದ ಅಳುಕಿ ಸೊರಗುತ್ತಿರುವ ನೀನು ಕಾರಣ ಎಂದು ಸಾಗರೀಕಾ ಹೇಳುವುದು ಎಲ್ಲ ಸತ್ಯಮಯವಾಗಿದೆ. ಸಮಾಜ ಒಪ್ಪಿಕೊಳ್ಳುತ್ತದೆ, ಅವಿವಾಹಿತಳಾಗಿಯೇ, ವಿಚ್ಛೇದಿತಳಾಗಿಯೇ ಅಲ್ಲ. ಕುಂಕುಮ ಧರಿಸಿದ, ಥಾಳಿ ಕಟ್ಟಿದ ಸ್ತ್ರೀಯನ್ನು ಮತ್ತು ಆಧ್ಯಾತ್ಮಕತೆಯನ್ನು ಒಪ್ಪಿಕೊಂಡ ಮಾತೆಯರನ್ನು ಇವೆರಡರ ನಡುವೆಯಿರುವ ಅವಿವಾಹಿತ ಮತ್ತು ವಿಚ್ಛೇದಿತ ಸ್ತ್ರೀಯರನ್ನು ನೋಡುವ ಸಮುದಾಯ ಸಮಾಜದ ಅಭಿಪ್ರಾಯಗಳು ಬದಲಾಗಬೇಕೆಂಬ ಕೂಗು ಕತೆಗಾರ್ತಿಯಲ್ಲಿ ಅಚ್ಚಳಿಯದೇ ಉಳಿದಿದೆ.

ಈ ನಿಟ್ಟಿನಲ್ಲಿ ಸ್ತ್ರೀಗೆ ಗಂಡ, ತಂದೆತಾಯಿ, ಮಾವಂದಿರು, ಸಮಾಜ ಚಿಂತಿಸಬೇಕಾದ ಅನಿವಾರ್ಯತೆಯನ್ನು ನೇಮಿಚಂದ್ರರವರ ಕಳೆಯಬೇಕಿದೆ ನಿನ್ನ ಜೊತೆಯಲ್ಲಿ ಒಂದು ಶ್ಯಾಮಲ ಸಂಜೆ ಎಂಬ ಕತೆಯ ಮೂಲಕ ಅಭಿವ್ಯಕ್ತಿಸಿದ್ದಾರೆ.

**ಕನಸುಗಳಲ್ಲಿನ ಹಾದಿಯಲ್ಲಿ** ಕತೆಯಲ್ಲಿ ಸಾವಿನಂಚಿನಲ್ಲಿರುವ ವ್ಯಕ್ತಿಯೊಬ್ಬನ ಮಾನಸಿಕ ಭಾವನೆಗಳನ್ನು ಪಾತ್ರದ ಮೂಲಕ ಹೇಳಲಾಗಿದೆ. ಸಾವು ಸಮೀಪಿಸುವ ಗಳಿಗೆ ತಿಳಿದಾಗ ಮನಸ್ಸಿನಲ್ಲಿ ಏಳುವ ನೂರೆಂಟು ಭಾವನೆಗಳ ಏರಿಳಿತಗಳನ್ನು ಕಾಣಬಹುದು. ಸಾವು ಎನ್ನುವುದು ಎಲ್ಲರಿಗೂ ಭಯ ಹುಟ್ಟಿಸುವಂತಹುದು. ಸಾವು

ಖಾತರಿ ಎಂದು ತಿಳಿದಿದ್ದರೂ ಬದುಕಬೇಕೆಂಬ ಆಸೆ ಹುಟ್ಟುವ ಮನುಷ್ಯನ ಸಹಜ ಭಾವನೆಗಳು ಕತೆಯಲ್ಲಿ ಮೂಡಿಬಂದಿದೆ.

ಕತೆಯಲ್ಲಿ ಚಿತ್ರಿಸಲಾಗಿರುವ ವ್ಯಕ್ತಿಯ ಭಾವನೆಗಳು ಓದುಗರಲ್ಲಿ ಸದಾ ಸಾವಿನ ಹಿಂದಿನ ಅನುಭವಗಳು ಹೇಗಿರುತ್ತವೆಂದು ತಿಳಿಯುವಷ್ಟು ಕತೆ ನಿರೂಪಿಸಲಾಗಿದೆ. ಬದುಕಿನ ಕೊನೆಯ ಅಂಚಿನಲ್ಲಿರುವ ವ್ಯಕ್ತಿಯಲ್ಲಿಯೂ ಹರೆಯದ ನೆನಪುಗಳು ಕಾಡುತ್ತವೆ, ಹರೆಯದ ಸಂತೋಷದ ಗಳಿಗೆಗಳು ಮತ್ತೆ ಮತ್ತೆ ನೆನಪಿಗೆ ಬರುತ್ತವೆ ಇದು ಕತೆಯಲ್ಲಿ ನಿರೂಪಿಸಲಾಗಿದೆ.

ಕತೆಯ ನಿರೂಪಣೆಯಲ್ಲಿ ಕೊಂಚ ನೀರಸ ಅನುಭವ ಉಂಟುಮಾಡುತ್ತದೆ. ಕಹಿ ಅನುಭವಗಳು ಉಂಟಾದಂತಹ ಭಾವನೆಗಳು ಮೂಡುತ್ತವೆ. ಭರವಸೆಯ ಬದುಕು ಕಟ್ಟಿಕೊಳ್ಳಲು ಹಾತೊರೆಯುವಂತೆ ಪ್ರೇರೇಪಿಸುತ್ತದೆ.

**ಕೆಂಪು ಕಲಕಿದ ನೀರು:** ಕತೆಯ ಮೊದಲ ಸಾಲುಗಳಲ್ಲಿ ಹರ್‍ಯಾಣದ ಮುಸ್ಸಂಜೆಯ ಸನ್ನಿವೇಶಗಳನ್ನು ಚಿತ್ರಿಸಿರುವುದು ಸಂಜೆಗತ್ತಲಿನ ಹರ್‍ಯಾಣ ಪ್ರಕೃತಿ ವೈಭವವನ್ನು ನೆನಪಿಗೆ ತರುತ್ತದೆ. ಸಂಜೆಯ ಸೂರ್ಯ ಜಾರುತ್ತಿದ್ದಂತ ಸಮುದ್ರದ ನೀರು ಕೆಂಪಾಗುತ್ತಾ ತಿರುಗಿ ಸೌಂದರ್ಯ ರಾಶಿಯಂತೆ ಕಂಗೊಳಿಸುತ್ತದೆ. ಸನ್ನಿವೇಶ ಕತೆಯ ದೂರು ಸಾಲಿನಲ್ಲಿ ಹೇಳಲಾಗಿದೆ. ಪ್ರೇಮ ಸನ್ನಿವೇಶದ ಮೂಲಕ ಕುರುಕ್ಷೇತ್ರ ಯುದ್ಧದ ಸನ್ನಿವೇಶ ಪರಿಚಯಿಸಿದ್ದಾರೆ.

ಪ್ರೇಮಿಗಳಿಬ್ಬರ ಸಂಜೆಯ ಪ್ರೇಮಕಾವ್ಯ ಕತೆಯಲ್ಲಿದೆ, ಪ್ರಣಯದ ಜೊತೆ ಸಂಜೆಯ ಸೌಂದರ್ಯ ಸವಿಯುತ್ತಾ ಇತಿಹಾಸ ಕೆದಕುವ ಪ್ರೇಮಿಗಳು ಓದುಗರಿಗೆ ಇತಿಹಾಸ ನೆನಪಿಸಲು ಸಹಕಾರಯಾಗಿದೆ.

ಸ್ನೇಹ ಮತ್ತು ಪ್ರೀತಿಗಳ ನಡುವಿನ ವ್ಯತ್ಯಾಸ ಕತೆಯಲ್ಲಿ ನೋಡುವುದು ಹುಡುಗಿಯೊಬ್ಬಳ ಹಳೆಯ ಪ್ರೀತಿ ನೆನಪುಗಳನ್ನು ಮುಂದೆ ಪರಿಚಯವಾಗುವ ವ್ಯಕ್ತಿಯೊಡನೆ ಹಂಚಿಕೊಳ್ಳುವ ಪ್ರಯತ್ನಗಳು ಓದುಗಾರಿಕೆಯನ್ನು ಹಿಡಿದಿಡುತ್ತವೆ. ಸ್ನೇಹವೆಂದಾಕ್ಷಣ ಅದು ಪ್ರೀತಿಯೇ ಎಂದು ಭ್ರಮಿಸುವ ಗಂಡುಮಕ್ಕಳ ಭಾವನೆಯನ್ನು ಕತೆಯಲ್ಲಿ ನಿರೂಪಿಸಲಾಗಿದೆ. ಹೆಣ್ಣುಮಗಳೊಬ್ಬಳ ಧೈರ್ಯ ನಿರ್ಧಾರವನ್ನು ಮೆಚ್ಚಲೇಬೇಕಾದುದು ಅನಿವಾರ್ಯವಾಗಿದೆ.

**ಕರಗುವ ಕನಸುಗಳು** ಕತೆಯಲ್ಲಿ ಒಂದು ಪತ್ರದ ಸಾರಾಂಶದ ಚಿಕ್ಕ ಎಳೆಯ ಮೂಲಕ ಕತೆಯ ನಿರೂಪಣೆ ಮಾಡಿರುವುದು ಇಲ್ಲಿ ಸ್ವಲ್ಪ ಬೋರ್ ಹೊಡಯುವ ರೀತಿ ಕತೆ ಸಾಗುತ್ತಾ ಹೋಗುತ್ತದೆ. ಲೌಕಿಕ ಬದುಕಿನ ಆಸಕ್ತಿ ಕಳೆದುಕೊಂಡ ವ್ಯಕ್ತಿಯ ಭಾವನೆಗಳನ್ನು ಇಲ್ಲಿ ಬಿಂಬಿಸಲಾಗಿದೆ.

ಪಾತ್ರದ ರಾಘವ ಅಧ್ಯಯನ ಮಾಡಿದಾಗ 'ಮದುರ'ನ ಬರಡಾದ ಮಾತುಗಳು ನಮ್ಮನ್ನೇ ಒಂದು ರೀತಿಯ ಅಲೌಖಿಕತೆಗೆ ಕೊಂಡೊಯ್ಯುತ್ತದೆಂಬ ಭಾವನೆಗಳು ಮೂಡುತ್ತವೆ. ಬದುಕು ಲೌಖಿಕತೆಯಿಂದ ಹಿಡಿದು ಮನುಷ್ಯನ ಸಂತೋಷಕ್ಕೆ ಲೌಖಿಕ ಜೀವನ ಕಾರಣವಾಗಿದಲ್ಲಿ ಕತೆಯಲ್ಲಿನ ಪಾತ್ರ ಲೌಕಿಕತೆಯ ಬರಡುತನವನ್ನು ಎತ್ತಿತೋರುತ್ತದೆ.

ಕತೆಯು ಚಿಕ್ಕ ಎಳೆಯಲ್ಲಿ ಸಾಗಿದ್ದು, ಸ್ವಲ್ಪ ಕುತೂಹಲ ಕಳೆದುಕೊಂಡಿದೆ. ಓದುಗನಿಗೆ ಸ್ವಲ್ಪ ನಿರಾಸೆಯಾಗುವುದು ಅಲ್ಲಲ್ಲಿ ಕಾಣುತ್ತದೆ. ನೀರಸ ಅನುಭವವನ್ನು ಇಲ್ಲಿ ವಿವರಿಸಲಾಗಿದೆ.

ತಾತ್ವಿಕತೆ ಕೇವಲ ಓದಲು ಮತ್ತು ಬೇರೋಬ್ಬರಲ್ಲಿ ನೊಡಲು ಚೆನ್ನಾಗಿರುತ್ತದೆ. ಆದರೆ ನಿಜ ಜೀವನದಲ್ಲಿ ಸ್ವಂತಿಕೆಯಿದ್ದಾಗ ಆಗುವ ಅನುಭವಗಳು ಈ ಕತೆಯಿಂದ ನಮ್ಮಲ್ಲಿ ಮೂಡಿಸುತ್ತದೆ.

**ನನ್ನದಲ್ಲದ ಬದುಕಿಗಾಗಿ** ಕತೆಯಲ್ಲಿ ಮೃದು ಮನಸ್ಸಿನ ಹೊಯ್ದಾಟದ ಕ್ರಾಂತಿಯ ಬಗ್ಗೆ ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. ಅಲ್ಲಿಯ ನೆಮ್ಮದಿಯ ಮನಸ್ಸು, ಕಥಾನಾಯಕಿಯ ಮನಸ್ಸಿನ ಚಿಂತೆಯ ಬಗ್ಗೆ ಚಿತ್ರಿಸುತ್ತಾ ಓದುಗರಿಗೆ ಆಸಕ್ತಿಯ ರಸದೌತಣದ ರುಚಿಯನ್ನು ಉಣಬಡಿಸಿದ್ದಾರೆ. "ಈ ರಾತ್ರಿಯ ಗಂಟೆಗಳನ್ನು ಕೊಲ್ಲಬೇಕು" ಇಲ್ಲಿ ಕಥಾನಾಯಕಿಗೆ ಸಮಯವನ್ನು ಬೇಗ ಕಳೆಯಬೇಕಾಗಿದೆ ಹಾಗೇನೆ ಪರೋಕ್ಷವಾಗಿ ಅವಳ ಭಯ, ಉದ್ವೇಗ ಸ್ಥಿತಿಯನ್ನು ರಿಮೂವ್ ಮಾಡುವ ರೀತಿ ಇದೆ.

ಸರೂಳಳ ಪ್ರಯಾಣವು ಜೀವನದ ಕನಸ್ಸಿಗೆ ಒಂದಷ್ಟು ಚಂದ್ರನ ನಗೆಯನ್ನು ಸಾಧಿಸಲು ಹೊರಟಿರುವಂತಿದೆ. ಪ್ರತಿ ಕ್ಷಣವು ಅವಳ ಮನಸ್ಸು ಮಲ್ಲಿಗೆಯ ಹಾಸಿಗೆಯ ಮೇಲೆ ಮಲಗುವಷ್ಟು ನೆಮ್ಮದಿಯನ್ನು ಕಾಣಬೇಕೆಂದು ತನ್ನ ಪ್ರಯಾಣದುದ್ದಕ್ಕೂ

ಪ್ರಯಾಣದ ಸವಿಯನ್ನು ವ್ಯರ್ಥ ಮಾಡುತ್ತಾ ಸಾಗಿದ ಮನಸ್ಸಿನ ಪಯಣವು ಓದುಗರ ಹೃದಯನ್ನು ನಾಟುವಂತಿದೆ.

ರೈಲಿನ ಪ್ರಯಾಣವು ಹೇಗೆ ಚಾಲಕನ ಹಿಡಿತಕ್ಕೆ ಹೊಂದಿಕೊಳ್ಳುವಂತೆ ಸರೋಜಳ ಬಾಂಬೆಯ ಪ್ರಯಾಣವು ಲಲ್ಲಿ ಮತ್ತು ಅವಳ ಕುಟುಂಬದ ಸಂಪ್ರದಾಯದ ಬಲೆಗೆ ಬಿದ್ದಂತೆ ಇಲ್ಲಿ ಭಾಸವಾಗಿದೆ.

ಮುಖ್ಯವಾಗಿ ಇಲ್ಲಿ ಪ್ರೇಮಿಗಳ ರಮಣೀಯವಾದ ರಸಿಕತನಕ್ಕೆ ಒತ್ತುಕೊಟ್ಟಿದ್ದು ಓದುಗ ತನ್ನ ಅಕ್ಷಪಟಲವನ್ನು ಮಿಟುಕಿಸದೆ ಓದುವ ಹುಚ್ಚು ಈ ಕತೆಯಲ್ಲಿ ಬಿಂಬಿತವಾಗಿದ್ದು, ಅಷ್ಟೇ ತನ್ನ ಹೃದಯವನ್ನು ಗಟ್ಟಿ ಮಾಡಿಕೊಳ್ಳುತ್ತ ಓದುಗ ತನ್ನ ಪಯಣದಲ್ಲಿ ಸಾಗುವಂತೆ ಮಾಡಿರುತ್ತಾರೆ.

ಕಥಾಲೇಖಕರು ಮನೆಯವರ ಸ್ಥಿತಿಯು ಪ್ರಸ್ತುತ ಸಮಾಜದ ಹೆಣ್ಣು ಹೆತ್ತ ಪೋಷಕರ ಸ್ಥಿತಿಗೆ ಹೋಲುವಂತಿದ್ದು, ಭಾರತದ ಸಂಸ್ಕೃತಿಯನ್ನು ಬಿಂಬಿಸಿದೆ. ಅಂದರೆ ಸರೂಳಳ ತಮದೆತಾಯಿಗಳು ಅವಳ ಬದುಕಿನ ಪಯಣವನ್ನು ತಲುಪಿಸಲಿಕ್ಕೆ ಅವರ ವ್ಯರ್ಥ ಪರಿಶ್ರಮ, ಹಾಗೂ ಆಧುನಿಕ ಜಗತ್ತಿನ ಅವರ ಜವಾಬ್ದಾರಿಯನ್ನು ಅಲ್ಲಗಳೆಯುವಂತಿಲ್ಲ.

ಇಲ್ಲಿ ಮುಖ್ಯವಾಗಿ ಕನ್ಯಾತ್ವ, ವಿಧವೆ, ಈ ಎರಡು ಪದಗಳೇ ಆಕೆಯ ಕೇಂದ್ರಬಿಂದುವಾಗಿದ್ದು, ಸರೂಳಳ ಎರಡನೆ ಮದುವೆ ಪ್ರಯಾಣವಾಗಿ ಉಳಿದಿದ್ದು. 'ಹೆಣ್ಣಿನ ದುಃಖ ಮರುಗಿದಷ್ಟು ಕಷ್ಟ' ಎಂಬಂತೆ ಹೆಣ್ಣಿನ ಶೀಲದ ಬಗ್ಗೆ ಮತ್ತು ಅವಳು ತನ್ನ ಕನ್ಯತ್ವದ ಬಗ್ಗೆ ಚಿಂತೆಯ ಬಲೆ ಬಿದ್ದಷ್ಟು ಅವಳು ತನ್ನ ಜೀವನದ ಪ್ರಯಾಣದುದ್ದಕ್ಕೂ ಖಿನ್ನತೆ, ಉದ್ವೇಗಗಳ ಸರಮಾಲೆಯನ್ನು ಹೊಂದಿರುವಂತದ್ದು ಈ ಕತೆಯಲ್ಲಿ ಗೋಚರಿಸುತ್ತದೆ.

ಮದುವೆಯು ಹೆಣ್ಣಿಗೆ ಹಾಕಿದ ಗೇಟಿನಂತೆ ಜೀವನ ಪೂರ್ತಿ ಗಂಡನ ಅಡಿಯಾಳಾಗಿ ಬದುಕುವಾಗ ಅವಳಿಗಾದ ಅನ್ಯಾಯ, ಆ ಅನ್ಯಾಯಕ್ಕೆ ನ್ಯಾಯ ದೊರಕಿಸುವುದು ಸ್ನೇಹಿತಳ ಶ್ರಮ ಮತ್ತು ಪ್ರತಿಕ್ಷಣವು ಲಲ್ಲಿಯ ಭರವಸೆಯ ಮಾತಿನ ಪ್ರಶ್ನೆಗಳನ್ನು ಸರೂಳಳ ಬದುಕಿಗೆ ಆಸೆ ಹುಟ್ಟಿಸಿದೆ. ಗಮಡ ತನ್ನ ರಸಿಕತೆಯನ್ನು ತೋರ್ಪಡಿಸಿದಾಗ ಹೆಣ್ಣೆಂಬ ಬಳ್ಳಿ ಗಂಡನ ಆಸರೆಗೆ ತಕ್ಷಣ ಬಾಗಿದಂತೆ ಇಲ್ಲಿ ಅವಳ ಕನ್ಯತ್ವ ಸೊರಗ ಹೋಗುತ್ತದೆ. ಮದುವೆಗೆ ಕಾಲಿಟ್ಟ ಅವಳ ಬದುಕು ದುರಂತವೇ ಸರಿ.

ಸಮಾಜ ಒಂದು ಹೆಣ್ಣಿಗೆ ಕೊಟ್ಟ ಉಡುಗೊರೆ ಅಂದರೆ "ಪ್ರತಿಭೆಗಿಂತ ಒಂದು ಯಕಃಶ್ಚಿತ್ ಕನ್ಯತ್ವದ ಇರುವಿಕೆ ದೊಡ್ಡದು" ಹೆಣ್ಣು ತನ್ನ ಪ್ರತಿಭೆಯ ಸಾಧನೆಗಿಂತ ಅವಳು ತನ್ನ ಕನ್ಯತ್ವದ ಕಾಪಾಡುವಿಕೆ ಅಷ್ಟು ದೊಡ್ಡದು. ಅದನ್ನು ಇಲ್ಲಿ ಲೇಖಕರು ತುಂಬಾ ಮುಖ್ಯವಾಗಿ ಇಲ್ಲಿ ತಿಳಿಸಿದ್ದಾರೆ. ಇದು ಇಂದಿನ ಆಧುನಿಕತೆಯು ಸಮಾಜಕ್ಕೆ ಸಮಾಜಕ್ಕೂ ಅಷ್ಟೇ ಮುಖ್ಯ.

ಒಂದು ಹೆಣ್ಣು ತನ್ನಲ್ಲಿ ಎಷ್ಟೇಲ್ಲ ಮೌಲ್ಯಗಳನ್ನು ತುಂಬಿಕೊಂಡಿದ್ದರು, ಅದು ರೈಲಿನಂತೆ ಯಾಂತ್ರಿಕವಾದ ಪಯಣದಂತೆ. ಕಾರಣ ಅವಳ ಮೌಲ್ಯಗಳನ್ನು ಹೊರಹಾಕುವಂತಿಲ್ಲ.

ಮದುವೆಯ ಅನುಬಂಧದ ಬಗ್ಗೆ ಹೇಳುವುದಾದರೆ ಲೇಖಕರು ಪ್ರಸ್ತುತ ಸನ್ನಿವೇಶಕ್ಕೆ ಹೊಂದಿಕೊಳ್ಳುವಂತೆ, ಅದರ ಉಪಯೋಗವನ್ನು ಅವರು ಓದುಗರಿಗೆ ಮನದಟ್ಟು ಮಾಡಿದ್ದಾರೆ. ಮದುವೆ ಎಷ್ಟು ಮುಖ್ಯವೋ ಅಷ್ಟೇ ಜೀವನ ನಡೆಸುವುದು ಮುಖ್ಯ ಎಂಬುದು ನಮಗೆ ಅರಿವಾಗುತ್ತದೆ. ಹೆಣ್ಣಿಗೆ ಸ್ವತಂತ್ರವಿಲ್ಲದೆ ಅವಳ ಮನಸ್ಸಿನಲ್ಲಿ ಆಸೆಗಳು ಜ್ವಾಲಾಮುಖಿಗಳಂತೆ ಸೆಟೆದು ನಿಲ್ಲುವಂತೆ ಪ್ರಯೋಜನವಿಲ್ಲದೆ ಕರಿಬಂಡೆಗಳಾಗಿವೆ.

ಹೆಣ್ಣು ತನ್ನ ಹರಿದ ಕನ್ಯತ್ವವನ್ನು ಹೊಸದಾಗಿಸಲಿಕ್ಕೆ ಲಲ್ಲಿಯಳ ಭರವಸೆಯ ಮಾತುಗಳು ಅವಳನ್ನು ಚಿಂತೆಗೀಡುಮಾಡಿ ವೈದ್ಯರನ್ನು ಬೇಟಿಮಾಡಿಸುತ್ತಾರೆ. ಕೊನೆಗೆ ವೈದ್ಯರ ಆಧುನಿಕತೆಯ ಸಲಹೆ ಕೇವಲ ಲಲ್ಲಿ ಮತ್ತು ಸರೋಳಳಿಗೆ ಅದು ಭಾಷಣವೆನಿಸಿ ಲಲಿ ಮತ್ತು ಸರೂಳಳು ವೈದ್ಯರಿಗೆ ಸಂಪ್ರದಾಯ ಮೌಲ್ಯಗಳನ್ನು, ಹೆಣ್ಣಿನ ನೋವನ್ನು ಎಳೆ ಎಳೆಯಾಗಿ ನೀಡಿರುವುದು, ಓದುಗರಿಗೆ ಆಸಕ್ತಿಯನ್ನು, ಉತ್ಸಾಹವನ್ನು ತುಂಬಿ, ಸರೂಳಳ ಬದುಕಿನ ಪ್ರಯಾಣ ಕೊನೆಯಾಗುವುದೇನು ಎಂದು ನನ್ನಲ್ಲಿರುವ ಬಯಕೆಗಾಗಿ ಕತೆಯ ಹಾಳೆಗಳನ್ನು ಓದುಗ ಮುಗುಚಿ ಹಾಕುತ್ತಾನೆ.

**ಹೊಸಹುಟ್ಟು** ಕತೆಯಲ್ಲಿ ನೇಮಿಚಂದ್ರರು ತಾಯಿಯ ಅಥವಾ ಹೆಣ್ಣಿನ ತಾಯ್ತನದ ಬಗ್ಗೆ ಸಂಪೂರ್ಣ ಚಿತ್ರಣವನ್ನು ಬಿಂಬಿಸಿದ್ದಾರೆ. ಭಾರತೀಯ ಸಂಸ್ಕೃತಿಯ ಪ್ರಕಾರ ಒಬ್ಬ ತಾಯಿ ಮಕ್ಕಳನ್ನು ಹೆರಬೇಕು ಆಗ ಅವಳಿಗೆ ಶ್ರೇಯಸ್ಸು. ಆಗ ಸಮಾಜವು ಅವಳಿಗೆ ಗೌರವವನ್ನು ಕೊಡುತ್ತದೆ ಎಂಬ ಮಾತನ್ನು ಈ ಕತೆಯಲ್ಲಿ ಎತ್ತಿ ತೋರಿಸಿದ್ದಾರೆ. ಶಶಿಯ ಬಂಜೆತನವು ಅವಳ ಕಲೆಗೆ ಮಾರಕವಾಗಿದ್ದರು, ರಮೇಶನ (ಗಂಡ) ನೈತಿಕ ಬೆಂಬಲದಿಂದ ಅವಳು ತನ್ನ ಪ್ರತಿಭೆಯನ್ನು ಹೊರಹಾಕಿ ಸಮಾಜದಲ್ಲಿ

ಬದುಕುವ ಛಲ, ಆಕಾಂಕ್ಷೆ, ಅವಳ ಗುರಿ ಎಲ್ಲವೂ ಪ್ರಸ್ತುತ ಸಮಾಜಕ್ಕೆ ಅತಿಮುಖ್ಯವಾದ ನಿದರ್ಶನವಾಗಿದೆ.

ಇಪ್ಪತ್ತೊಂದನೆಯ ಶತಮಾನದಲ್ಲೂ ಹೆಣ್ಣಿನ ಮೇಲೆ ನಿರಂಕುಶ ಬಲವನ್ನು ಪ್ರಯೋಗಿಸುವ ಮನೆಗಳಲ್ಲೂ, ಲೇಖಕರು ಇಂಥ ದಿಟ್ಟ, ನೇರ, ಧೈರ್ಯತನ ತುಂಬಿದ ಹೆಣ್ಣಿನ ಒಂಟಿತನದ ಬಗ್ಗೆ ಕೂಲಂಕಷವಾಗಿ ಕತೆಯಲ್ಲಿದೆ. ಆದರೂ "ತಾಯ್ತನಕ್ಕಿಂತ ದೊಡ್ಡ ಸಾಧನೆ ಯಾವುದೂ ಇಲ್ಲ"[೧] ಈ ರೀತಿಯ ಬೆಳವಣಿಗೆಯಲ್ಲಿ ಹೆಣ್ಣಿನ ಮೇಲೆ ನಾವು ವೈಜ್ಞಾನಿಕ ಸಮಸ್ಯೆ ಅರ್ಥಮಾಡಿಕೊಳ್ಳದೇ ಅವರನ್ನು ದೂಷಿಸುವುದು ಸರಿಯಿಲ್ಲ.

ಭಾರತೀಯ ಪುರುಷನು ತನ್ನ ಹೆಂಡತಿಯ ಗರ್ಭಕೋಶದಲ್ಲಿ ದೋಷವಿರುವುದು ಕಂಡುಬಂದರೂ, ಅವನು ತನ್ನ ಪತ್ನಿಯ ಬಗ್ಗೆ ಸಹಾನುಭೂತಿ, ತಾಳ್ಮೆ, ಹೊಂದಿದವನಾಗಿ ಅವಳ ಜೊತೆಯಲ್ಲಿ ಮಕ್ಕಳು ಇಲ್ಲದರ ಬಗ್ಗೆ ಕಿಂಚಿತ್ತೂ ಬೇಸರ ವ್ಯಕ್ತಪಡಿಸದೆ ನಿರಂತರವಾಗಿ ತನ್ನ ಪತ್ನಿಯ ಬೆಂಬಲಕ್ಕೆ ತೊಡಗಿರುವುದಂತೂ ಇಲ್ಲಿ ಅಮೋಘವಾಗಿ ಗಂಡು-ಹೆಣ್ಣು ಒಂದೇ ಎಂಬ ಮಾನದಂಡಕ್ಕೆ ಒಂದು ಸ್ಥಿರ ಚಿತ್ರಣವನ್ನು ಈ ಕತೆಯಲ್ಲಿ ಪ್ರದರ್ಶಿಸಿದ್ದಾರೆ.

ಶಸಿ ಉತ್ತಮ ಪೇಂಟಿಂಗ್ ಬಿಡಿಸಿ, ಅನೇಕಾನೇಕ ಪ್ರಶಸ್ತಿಗಳನ್ನು ಗಿಟ್ಟಿಸಿಕೊಂಡಿದ್ದರೂ ಅವಳಿಗೆ ಒಂದು ಕತೆ ಇತರ ಸ್ತ್ರೀಯರು ತಮ್ಮ ತಮ್ಮ ಕರುಳಿನ ಕುಡಿಗಳ ಜೊತೆ ಉಲ್ಲಾಸದಿಂದಿರುವಾಗ ಅವಳಿಗೂ ನನಗೂ ಒಂದು ಕರುಳಿನ ಬಳ್ಳಿ ಇದ್ದಿದ್ದರೆ, ಹೇಗೆ ಎಂದು ಮರುಗುವುದನ್ನು, ಲೇಖಕರು ತಾಯಿಯ ತಾಯಿತನ, ಸಮಾಜದಲ್ಲಿ ಹೆಣ್ಣಿನ ಪಾತ್ರ ಮತ್ತು ಒಬ್ಬ ಸ್ತ್ರೀಯ ಮಾನಸಿಕ ವೇದನೆ, ಆಸೆ, ಆಕಾಂಕ್ಷೆ, ಮಕ್ಕಳ ಬಗ್ಗೆ ಪ್ರೀತಿ ಎಲ್ಲವನ್ನು ಇಲ್ಲಿ ಓದುವ ಮನಸ್ಸುಗಳಿಗೆ ಹೆಣ್ಣಿನ ಪಾತ್ರದ ಬಗ್ಗೆ ಹಳ್ಳಿಗೆ ನಾವು ಕೊಡಬೇಕಾದ ಗೌರವದ ಬಗ್ಗೆ ಭಾಸವಾಗುವಂತೆ ಪದಗಳಲ್ಲೂ ತುಂಬಾ ಸೊಗಸಾಗಿ ಎಳೆಎಳೆಯಾಗಿ ಕತೆಗಾರ್ತಿ ಅಭಿವ್ಯಕ್ತಿಸಿದ್ದಾರೆ.

"ಒಬ್ಬ ಪತ್ನಿ ಪತಿಗೆ ನಿನಗೆ ನಿನ್ನದೇ ವಂಶದ ಗುಡಿ ಬೇಕು ಅನ್ನಿಸುತ್ತಿಲ್ಲವಾ?" ಎಂದಾಗ ತಕ್ಷಣ ಅವಳ ಗಮನವನ್ನು ಬೇರೆ ಅತ್ತ ಕಡೆ ಸೆಳೆಯುವುದಂತೂ ಆಧುನಿಕ ಪ್ರಪಂಚಕ್ಕೆ ಒಂದು ಸುಂದರ ಗಂಡಿನ ಜವಾಬ್ದಾರಿಯುತ ಬಾಲ್ಯವೆನಿಸಿದೆ.

---

೧. ೧ನೇ ನೇಮಿಚಂದ್ರರ ಹೊಸಹುಟ್ಟು, ನೇಮಿಚಂದ್ರ ಇಲ್ಲಿಯವರೆಗಿನ ಕತೆಗಳು, ಪುಟ ಸಂಖ್ಯೆ. ೨೭೨.

ಹೊಯ್ದಾಟ ಮನಸ್ಸುಗಳ ಭಾವನೆಯನ್ನು ಲೇಖಕಿಯವನು ಎಳೆಎಳೆಯಾಗಿ ಬಿಚ್ಚಿ, ಸಂಕೇತ, ಪ್ರೀತಿ, ಮಹಾತ್ವಕಾಂಕ್ಷೆ ಮತ್ತು ಆತ್ಮವಿಶ್ವಾಸಗಳು ಅವಶ್ಯಕತೆಯ ಬಗ್ಗೆ ಅವರು ಮನಸ್ಸು ಬಿಚ್ಚಿ ಹೇಳುವಂತಿದೆ. ಹದಿಹರೆಯದ ಭಾವನೆಯಲ್ಲಿ ಅರಳಿದ ಪ್ರೇಮ ಕೊನೆಗೆ ಪ್ರೀತಿಯ ಅವಶ್ಯಕತೆಯನ್ನೇ ದೂರ ಮಾಡಿ ಸ್ನೇಹ ಕಳಚಿ ಬೀಳುವಂತಹ ಸನ್ನಿವೇಶವಂತೂ ಓದುಗರ ಮನಸ್ಸನ್ನು ಚುಚ್ಚುವಂತಿದೆ.

ಶಶಿ, ತನ್ನ ಗಂಡನಾಗುವನು ಎತ್ತರಕ್ಕೆ ಬೆಳೆಯಬೇಕು ಎಂಬ ಕನಸನ್ನು ಕಟ್ಟಿಕೊಮಡಿರುತ್ತಾಳೆ. ರವಿಗೆ ನೀನು ನೀನೇ ಅಲ್ಪತೃಪ್ತನಾಗಿದ್ದೀಯಾ, ರಮೇಶ, ವಿಜಯ್‌ರಂತೆ ಏಕಾಗಬಾರದು ಎಂದಾಗ ಅವನ ಉದಾಸೀನದ ಮಾತುಗಳು ಶಸಿಗೆ ಎಲ್ಲೋ ಒಂದು ಕಡೆ ಸೋಲನ್ನು ಒಪ್ಪಿಕೊಳ್ಳಬೇಕೆಂಬ ಪ್ರಜ್ಞೆ ಅವಳಲ್ಲಿ ಕಾಡಿತ್ತು.

ಶಶಿಯು ರವಿಯ ಜೊತೆ ಎಂಗೇಜ್‌ಮೆಂಟ್ ಅವಳು ರವಿಯ ಸಾಧನೆಗಿಂತ ಎತ್ತರವಾಗಿ ಬೆಳೆದಂತೆಲ್ಲಾ ಅವನು ಗಿಡ್ಡನಾಗುತ್ತ ಹೋದ, ಇದು ಶಸಿಗೆ ಅವನ ಸರಳ ಜೀವನ ಹಿಡಿಸದೆ ಅವನ ಬಗ್ಗೆ ವೈರಾಗ್ಯ ತಾಳುತ್ತಾಳೆ ಮತ್ತು ಆಗಾಗ ಅವನನ್ನು ಮೂದಲಿಸುವ ಮಾತುಗಳು 'ಏನೊಂದು ಆಗವುದರ' ಕತೆಯಲ್ಲಿ ಸ್ಪಷ್ಟ ದ್ವಂದ್ವ ನಿಲುವನ್ನು ಅಲ್ಲಗಳೆಯುವಂತಿಲ್ಲ.

ಒಬ್ಬ ಕನ್ಯೆ ಕಿಶೋರಿಯಾಗಿ ಪ್ರೀತಿ ಧಾರೆಯೆರೆದ ಮೇಲೆ, ವಯಸ್ಕತನಕ್ಕೆ ಕಾಲಿಟ್ಟಾಗ ವಿಭಿನ್ನ ಚಿಂತನೆಯನ್ನು ತನ್ನವನ ಬಗ್ಗೆ ಪರೋಕ್ಷವಾಗಿ ಕೀಳರಿಮೆಯನ್ನು ಬಿತ್ತರಿಸಿ ಹೋಗುವಂತಹ ಪಯಣದ ಹಾದಿಯಲ್ಲಿ ಅವನ ಬಗ್ಗೆ ಮೃಗವರ್ತನೆಯಂತೆ ವರ್ತನೆ ಹೃದಯವನ್ನು ಕಲ್ಲಾಗಿಸಿ ಬಿಡುತ್ತಾಳೆ.

ಕೊನೆಗೆ ಕಟ್ಟಿದ ಪ್ರೀತಿ ಕಳಚಿಬೀಳುವ ಪರಿಸ್ಥಿತಿಯನ್ನು ಲೇಖಕಿಯರು ಹೆಣ್ಣಿಗೆ ನೀರೆರುವುದು. ಒಂದು ಹೊಸ ಬರಹವೇ ಆಗಿದೆ. ಇಲ್ಲಿ ಗಂಡಿಗೆ ದೃಢಮನಸ್ಸಿದ್ದರು ಅವನನ್ನು ಸರಳ ಬದುಕಿನ, ಸಹನಾಮೂರ್ತಿಯಾಗಿಸಿಬಿಟ್ಟಿದ್ದಾರೆ. ಶಶಿಗೆ ವಿದೇಶದ ಆಫರ್ ಬಂದಾಗ ಅವಳ ಅಹಂ ಕೇಂದ್ರಿತ ಮನಸ್ಸು, ಇಮ್ಮಡಿಯಾಗುವ ದೇಹದ ಸ್ಥಿತಿಯನ್ನು ತುಂಬಾ ಚೆನ್ನಾಗಿ ತಿಳಿಸಿದ್ದಾರೆ. ಪ್ರತಿಯೊಬ್ಬರೂ ಹೆಣ್ಣಿನ ಬಗ್ಗೆ ಕ್ರೂರತನವನ್ನು ಹೊರಹಾಕುವ ಕಠಿಣ ಹೃದಯವನ್ನು ಓದುಗರಲ್ಲಿ ಸೃಷ್ಟಿಸಿದ್ದಾರೆ. ಮತ್ತು ಹೆಣ್ಣಿನ ಕ್ರೂರ ಗರ್ಜನೆಗೆ ಗಂಡು ಅನುಭವಿಸುವ ಅಸಹನೆ ಸ್ಥಿತಿಯನ್ನು ವರ್ಣಿಸಿರುವುದು ಹಾಗೂ ಪ್ರಸ್ತುತ ನಾಗರಿಕತೆಗೆ ಇದೂ ಮುತ್ತಿನಂತೆ ಕೆಲಸ ಮಾಡುವಂತಹ ಕತೆಯಾಗಿದೆ.

**ಬದುಕು ನಿನ್ನಲ್ಲೆಂಥಾ ಮುನಿಸು** ಕತೆಯಲ್ಲಿ ಬದುಕು ಏಕಾಂತವೇ ಅಥವಾ ಏಕಾಂತವೇ ಬದುಕೆ ಎನ್ನುವ ರೀತಿಯಲ್ಲಿ ಲೇಖಕಿ ಈ ಕತೆಯಲ್ಲಿ ಬದುಕಿನುದ್ದಕ್ಕೂ ಜಂಜಾಟದ ನೋವನ್ನು, ಮನಸ್ಸಿನ ಆತಂಕವನ್ನು ಸೆರೆಹಿಡಿಯುವುದಲ್ಲದೇ, ಶಶಿಯ ದಾಂಪತ್ಯ ಜೀವನ ಕಷ್ಟಕೋಟಲೆಗಳನ್ನು ಇಲ್ಲಿ ನೋಡಬಹುದು.

ರಮೇಶನನ್ನು ನ್ಯಾಯಮೂರ್ತಿಯ ಸ್ಥಾನದಲ್ಲಿ ಕೂರಿಸಿ, ಸಿನಿಕನ ಹಾಗೆ ಎಲ್ಲವನ್ನೂ ದ್ವೇಷಿಸುವದೂ ಬೇಡ, ಎಲ್ಲರಲ್ಲೂ ಒಬ್ಬನಾಗಬೇಕೆಂಬುದು ಅವನ ಇಚ್ಛೆ. ಹೆಂಡ್ತಿ ಕ್ಯಾನ್ಸ್‌ನಿಂದ ಬಳಲುತ್ತಿದ್ದರು ಎಂದೂ ಅವಳನ್ನು ನೀನು ರೋಗಿಷ್ಠೆ ಎಂದು ಜರಿಯದೆ, ಪ್ರೀತಿ, ಅನುಕಂಪ ಅವಳು ನನ್ನ ಕಣ್ಣು ಎಂದು ಹೆಂಡ್ತಿಯೇ ಸರ್ವಸ, ಮನೆಯ ಮಹಾಲಕ್ಷ್ಮಿ ಎಂದು ತಾತ್ಸಾರವನ್ನು ಮರೆತು ಅವಳ ನೆರವಿಗೆ ನಿಲ್ಲುವುಧನ್ನು ಇಲ್ಲಿ ಸ್ಮರಿಸಬಹುದು.

ಬದುಕು ಒಂದು ಸುಂದರ, ಬದುಕು ಹಸಿರು ದಿಬ್ಬದ ಮೇಲಿನ ಸಣ್ಣ ಝರಿ, ದಟ್ಟವಾದ ಬೆಟ್ಟ ಎನ್ನುವ ಹಾಗೆ ಎನಿಸುತ್ತದೆ. ಈ ಬದುಕಿನ ಪ್ರವಾಸ ಬಿಸಿಲ ಹಾದಿಯಲ್ಲಿ ನಡೆದು ಕೊನೆಗೆ ರಾತ್ರಿಯಲ್ಲಿ ಕೊನೆಗೊಳ್ಳುವ ಹಾಗೆ ರಮೇಶ ಮತ್ತು ಶಶಿಯ ಜೀವನದಲ್ಲಿ ಸಂತೋಷವಿದ್ದರೂ ದುಃಖ ಅವರ ಮನೆ ಮಾತಿದ್ದರೂ ಮತತೆ ಸ್ಫೂರ್ತಿಯ ನೆರಳಿನಲ್ಲಿ ಬದುಕುವ ಬದುಕನ್ನು ಎಲ್ಲರೂ ಇಷ್ಟಪಡುವ ಹಾಗೆ ಚಿತ್ರಿಸಿರುವ ಲೇಖಕಿಯ ಹೃದಯ ವೈಶಾಲ್ಯವಂತೂ ಎದ್ದುಕಾಣುತ್ತದೆ.

**ಸಾವಿನತ್ತ ಒಂದು ಹೆಜ್ಜೆ** ಕತೆಯಲ್ಲಿ ರವಿಯ ನಿಜವಾದ ಪ್ರೀತಿಯ ಬಗ್ಗೆ ಲೇಖಕಿಯವರು ಸೊಗಸಾಗಿ ಬರೆದಿದ್ದಾರೆ. ಪ್ರೀತಿ ನಿಜವಾಗಿದ್ದಲ್ಲಿ ಯಾವುದೇ ಕಠಿಣ ಪರೀಕ್ಷೆಯನ್ನು ಧೈರ್ಯವಾಗಿ ಎದುರಿಸಬಹುದು ಎಂಬುದಕ್ಕೆ ರವಿಯೇ ಕಾರಣನಾಗಿದ್ದಾನೆ. ನಿಜವಾದ ಪ್ರಿತಿ ವಿಧಿ ವಿಲಾಸಕ್ಕೆ ಹೆದರುವುದಿಲ್ಲ. ಅದು ಕಾಲಕ್ಕೆ ಹೆದರುವುದಿಲ್ಲ, ನಿಜವಾದ ಪ್ರೀತಿ ಇದ್ದರೇ ಅದನ್ನು ಬೇರ್ಪಡಿಸಲು ಯಾರಿಂದಲೂ ಸಾಧ್ಯವಿಲ್ಲ. ಪ್ರಪಂಚದ ಪರಿಸ್ಥಿತಿಗಳನ್ನು ಎದುರಿಸಲೂ ತಯಾರಾಗಿರುತ್ತದೆ. ಪ್ರೀತಿ ಹೋರಾಡಿ ಪ್ರಪಂಚದ ಮೇಲುಕೀಳುಗಳನ್ನು ಎದುರಿಸಿ ಸ್ಥಿರವಾಗಿರುತ್ತದೆ. ನಿಜವಾದ ಪ್ರೀತಿ ಸೋತು ಮಾಯವಾಗುವುದಿಲ್ಲ. ನಿಜವಾದ ಪ್ರೀತಿ ಧ್ರುವತಾರೆಯಂತೆ ಪ್ರಜ್ವಲಿಸುವುದು, ಹಾಗೂ ನೈಜ ಪ್ರೀತಿ ಪ್ರಕೃತಿಯ ಯಾವುದೇ ಆಘಾತಗಳನ್ನು ತಡೆದುಕೊಳ್ಳಬಲ್ಲದು. ಆದರೆ ಈ ಕತೆಯಲ್ಲಿ ರವಿಯ ನಿಜವಾದ ಪ್ರೀತಿ ಅವನ

ಪ್ರೇಯಸಿಯ ಸಾವು ಇವೆಲ್ಲವೂ ಅವನನ್ನು ಆತ್ಮಹತ್ಯೆಗೆ ಚಿಂತಿಸುವಂತೆ ಮಾಡಿರುವ ಈ ಎಮೋಷನಲ್ ಅಂಶಗಳು ಕತೆಯಲ್ಲಿ ಆಸಕ್ತಿಯನ್ನು ಮೂಡಿಸಿದೆ.

ಹೇಗೆ ನಾವಿಕನಿಗೆ ಧ್ರುವತಾರೆ ದಿಕ್ಕು ತೋರುವುದೋ ಹಾಗೇ ನೈಜ, ಪ್ರೀತಿ ಮನುಷ್ಯನಿಗೆ ತಾಳ್ಮೆ ಹಾಗೂ ಮನುಷ್ಯತ್ವವನ್ನು ಕಲಿಸುತ್ತದೆ. ಪ್ರೀತಿ ಉದಾತ್ತ ಕಾರ್ಯಗಳಿಗೆ ಪ್ರೇರಕ ಶಕ್ತಿಯಾಗಿರುವುದು. ರವಿ ಜೀವನದಲ್ಲಿ ಮತ್ತಾಕೆಯೊಬ್ಬಳು ಬಂದು ಪ್ರೀತಿಯ ಚಿಲುಮೆಯ ಪರೀಕ್ಷೆಯನ್ನು ಇಟ್ಟಾಗ ಅವನ ಆತ್ಮಹತ್ಯೆಯ ಕೆಟ್ಟ ಯೋಚನೆ ಮಾಯವಾಗಿ ಜೀವನ ಸುಗಮವಾಗಿಸುವಂತಹ ವೈಖರಿ, ಸ್ಥಿತಿ ಇಲ್ಲಿ ಓದುಗನಿಗೆ ಆತ್ಮಸ್ಥೈರ್ಯವನ್ನು ಈ ಕತೆ ತುಂಬುತ್ತದೆ.

**ಮತ್ತೆ ಬರೆದ ಕವನಗಳು** ಕತೆಯಲ್ಲಿ ಅಜಯ್‌ಯು ಶ್ರೀಮತಿ ಪ್ರಿಯಾಳ ಜೊತೆ ಪ್ರಯಾಣಿಸುವಾಗ ಅವಳು ಅವನ ಜೊತೆ ಪ್ರಯಾಣದುದ್ದಕ್ಕೂ ಸ್ನೇಹದ ಸಲಿಗೆ ಮತ್ತು ಜೊತೆಯಲ್ಲಿರುವಾಗ ಅವಳು ತನ್ನ ಬಾಲ್ಯದ ನೆನಪುಗಳನ್ನು ಒಂದೊಂದಾಗಿ ಅರ್ಥವತ್ತಾಗಿ ಈ ಕತೆಯಲ್ಲಿ ಬಿಂಬಿಸಲಾಗಿದೆ. ಅವಳ ಪ್ರಯಾಣ ಜಮ್ಮುವಿನ ಅನುಭವದೊಂದಿಗೆ ತನ್ನ ನೆನಪುಗಳನ್ನು ವರ್ಣನೆಯನ್ನು ಇಲ್ಲಿ ಕಾಣಬಹುದು.

ಪ್ರೀತಿ ಎಂಬುದು ಕಾಲದ ದಾಸನಲ್ಲ, ಪ್ರೀತಿಯ ಕಾಲವನ್ನು ಮೀರಿನಿಂತ ಭಾವನೆ, ಪ್ರೀತಿಯು ಬದಲಾಗುವ ಕಾಲದ ಜೊತೆ ಬದಲಾಗುವುದಿಲ್ಲ. ದೇಹದ ಸೌಂದರ್ಯ ಕ್ಷೀಣಿಸಿದರೂ, ಪ್ರೀತಿ ಕ್ಷೀಣಿಸುವುದಿಲ್ಲ. ನಿಜವಾದ ಪ್ರೀತಿ ಸೌಂದರ್ಯ ಮಾತ್ರವಲ್ಲ, ನಿಜವಾದ ಪ್ರೀತಿ, ಕೆಲಗಂಟೆಗಳು ಅಥವಾ ವರ್ಷದ್ದಲ್ಲ, ಕಾಲಾತೀತಿವಾದದ್ದು ಎಂಬ ಪ್ರಿತಿಯ ನೆನಪಿನಂಗಳವನ್ನು ಲೇಖಕಿಯರು ಅವರ ಪ್ರಯಾಣದುದ್ದಕ್ಕೂ ಅನುಭವಿಸುವ ಪ್ರಕೃತಿ ಸೌಂದರ್ಯದ ಜೊತೆಗೆ ಅನುಭವಗಳ ಸರಮಾಲೆಯನ್ನು ಮೆಲುಕು ಹಾಕುವ ಪರಿಸ್ಥಿತಿಯನ್ನು ರಮಣೀಯವಾದ ರಸಿಕತನದ ವರ್ಣನೆ ತುಂಬಾ ಚೆನ್ನಾಗಿ ತಿಳಿಸಿದ್ದಾರೆ.

**ಕಪ್ಪುಮೋಡ, ಬೆಳ್ಳಿ ಅಂಚು** ಕತೆಯಲ್ಲಿ ಮಹಿಳೆಯ ಮಸುಕು ಮಸುಕಾದ ಉಲ್ಲಾಸವಿಲ್ಲದ ಏಕಾಂತ ಬದುಕನ್ನು ಚಿತ್ರಿಸಿರುವ ಅವರ ವರ್ಣರಂಜಿತವಾದ ಬರವಣಿಗೆ ಶೈಲಿ ಓದುಗನಲ್ಲಿ ಶಾಂತ, ಏಕಾಂತ ಚಿತ್ತತೆಯನ್ನು ಬಣ್ಣಿಸಿದ್ದಾರೆ. ಅವಳು ರವಿಯ ಬಗ್ಗೆ ಚಡಪಡಿಸುವ ರೀತಿ ಮತ್ತು ಅಂಜಿಕೆಯಿಂದ ಕರಗುತ್ತಿರುವ ಹಿಮದ ಹಾಗೇ ಕಣ್ಣೀರಿನ ಬವಣೆಯನ್ನು ಈ ಕತೆಯಲ್ಲಿ ತಿಳಿಸಲಾಗಿದೆ.

ಪ್ರತಿಯೊಬ್ಬ ಮಹಿಳೆಯು ಸ್ವತಂತ್ರ ಬದುಕಿನಡೆಗೆ ಹೋರಾಡುವ ಸ್ಥಿತಿಯಿದ್ದರೂ ಅದು ಕೇವಲ ಅಜ್ಞಾನದ ಕತ್ತಲು ಎಂದು ಗಂಡನ ಆಸರೆಯನ್ನು ಬೇಡುವ ಸ್ಥಿತಿ ಎಲ್ಲವೂ ಚೆನ್ನಾಗಿ ಪ್ರಸ್ತುತ ಸಮಾಜಕ್ಕೆ ಮಾದರಿಯಾಗುವ ಕತೆ ಎನಿಸಿದೆ.

**ನೆನಪುಗಳು ನೋಯಲಿಲ್ಲ** ಕತೆಯಲ್ಲಿ ಮಗಳ ಜೊತೆ (ಶಾಮೋನಿ) ತಾಯಿ ಬಿಚ್ಚುಮನಸ್ಸಿನಿಂದ ಅನುಭವಗಳನ್ನು ಭಾವನೆಗಳನ್ನು ಹಂಚಿಕೊಂಡಾಗ ಮನಸ್ಸು ಆಹ್ಲಾದಕರವೂ ಹಾಗೂ ಮಗಳಿಗೆ ಜೀವನದ ಅನುಭವಗಳು ಸಹ ಗೊತ್ತಾಗುತ್ತದೆ.

ಶಾಮೋನಿ, ಸಾವಿತ್ರಿ, ಗೋಪಿ ಮತ್ತು ರವಿಯ ಸಂಭಾಷಣೆಯೊಂದಿಗೆ ನೇಮಿಚಂದ್ರರವರು ತುಂಬಾ ಸೊಗಸಾಗಿ ನೆನೆಪುಗಳು ನೋಯಲಿಲ್ಲ ಎಂಬ ಕತೆಯಲ್ಲಿ ನೆನಪುಗಳ ಬುತ್ತಿಯನ್ನು ನೆನೆಸಿಕೊಂಡಾಗ ಮುಂದೆ ಯಾವ ರೀತಿ ನಡೆದುಕೊಳ್ಳಬೇಕು, ಹಿಂದೆ ನಾನು ಮಾಡಿದ್ದು ತಪ್ಪಾ, ತಪ್ಪಾಗಿದ್ದರೆ ಮುಂದೆ ಸರಿಪಡಿಸಿಕೊಳ್ಳುವ ನಿಟ್ಟಿನಲ್ಲಿ ತುಂಬಾ ಮನೋಜ್ಞವಾಗಿ ವೈವಿದ್ಯಮಯದೊಂದಿಗೆ ಚಿತ್ರಿಸಿದ್ದಾರೆ.

ಅಮ್ಮನೊಳಗೆ ಏನು ವಿಷಯಗಳನ್ನು ಅವಳ ಜೀವನವನ್ನು ಘಾಸಿಗೊಳಿಸಿತ್ತು, ಅದು ಅವಳ ಅಮತರಂಗವನ್ನೇ ಸುಟ್ಟು ಬೂದಿಯಾಗಿಸಿದೆ.

ಶ್ಯಾಮೋನಿಯಲ್ಲಿ ಆದಂತಹ ಅನುಭವ ಅವಳ ಜೀವನದಲ್ಲಿ ಕಹಿ ಘಟನೆಯಾಗಿ ಅಚ್ಚಳಿಯದೆ ಉಳಿದಿದೆ. ಸಂಭ್ರಮದಿಂದ ಪೋಟೋಗೆ ಪೋಸ್ ಕೊಡುವಾಗ ಜಾರಿದ ಕ್ಷಣ, ಆದರೆ ಸಹೋದ್ಯೋಗಿ ರವಿಯಿಂದ ಬದುಕಿದ್ದು, ತನ್ನ ಗಂಡ ಗೋಪಿ ಕೂಗಿದರೂ ಬರಲಾಗದೆ ಇದ್ದದ್ದು ಅವಳ ಮನಸ್ಸಿನಲ್ಲಿ ಇಂತಹ ಪರಿಸ್ಥಿತಿಯನ್ನು ತಂದಿತ್ತು.

ಬದುಕಿನ ಒಂದು ಕ್ಷಣ, ಒಂದು ವಿಷಯ, ಒಂದು ಮಾತು ಇದೇ ಜೀವನವನ್ನು ಬದುಕನ್ನು ಬದಲಾಯಿಸಬಲ್ಲದು.

ಅಮ್ಮ ಬದುಕು ನಮಗೇನಾಗುತ್ತೆ ಎಂಬುವಲ್ಲಿ ನಮಗಾದದ್ದನ್ನು ನಾವು ಹೇಗೆ ಸ್ವೀಕರಸುತ್ತೇವೆ, ಹೇಗೆ ಎದುರಿಸುತ್ತೇವೆ, ಹೇಗೆ ಮುಖಾಮುಖಿಯಾಗುತ್ತೇವೆ.[೧] ನೆನಪುಗಳು ಶಾಶ್ವತ, ಅದನ್ನು ಹೇಳಿಕೊಂಡಷ್ಟು ಮನಸ್ಸು ಹಗುರದಿಂದ ಕೂಡಿರುತ್ತದೆ.

---

೧. ನೇಮಿಚಂದ್ರ, 'ನೆನಪುಗಳು ನೋಯಲಿಲ್ಲ', 'ಇಲ್ಲಿಯವರೆಗಿನ ನೇಮಿಚಂದ್ರರ ಕತೆಗಳು, ಅಂಕಿತ ಪ್ರಕಾಶನ, ಬೆಂಗಳೂರು, ಪು. ೧೭೬.

ಬದುಕಿನ ಮುಸ್ಸಂಜೆಯಲ್ಲಿ ಏಳುವ ಆಲೋಚನೆಗಳ ಅನಾವರಣಗೊಳಿಸುವ ಲೇಖಕರ ಶೀರ್ಷಿಕೆ "ಮುಸ್ಸಂಜೆ ಎಷ್ಟು ಸುಂಎರ ಮನಸ್ಸಿನ ಕದ ತಟ್ಟುವಂತಿದೆ. ಮನುಷ್ಯನ ಸಹಜ ಬಯಕೆಗಳು, ಪ್ರೀತಿಯ ಹುಡುಕಾಟ, ಭಾವನೆಗಳ ಕದಡುವಿಕೆಯ ಸನ್ನಿವೇಶಗಳ ಚಿತ್ರಣ ಕತೆಯ ಶೀರ್ಷಿಕೆಯಲ್ಲಿ ಬಿಂಬಿತವಾಗಿದೆ. ಕತೆಯನ್ನು ಅಭಿವ್ಯಕ್ತಿಗೊಳಿಸುವ ಮೇಘನಾ ಪಾತ್ರ ಮನಮುಟ್ಟುವಂತೆ ಚಿತ್ರಿತವಾಗಿದೆ. ಓದುಗನ ಜೀವನದ ವೃತ್ತಾಂತಕ್ಕೆ ನೆನಪುಗಳ ಮಧುರ ಅನುಭವದ ಹೃದಯ ತೆರೆದುಕೊಳ್ಳುವಂತೆ ಕತೆಯನ್ನು ಕೊಂಡೊಯ್ದಿರುವ ಲೇಖಕರ ಕಥಾವಸ್ತು ಹಾಗೂ ಸನ್ನಿವೇಶಳು ಮನಸ್ಸನ್ನು ಮುದಗೊಳಿಸುತ್ತವೆ.

ಪ್ರಸ್ತುತ ಕಥಾಸನ್ನಿವೇಶಗಳು ವ್ಯಕ್ತಿತ್ವದ ವಿಭಿನ್ನ ಮುಖಗಳು, ಮನಸ್ಥಿತಿಗಳನ್ನು ಅನಾವರಣಗೊಳಿಸುತ್ತವೆ. ಬಳಕೆಯಾಗಿರುವ ಭಾಷಾಸಾಹಿತ್ಯ, ಕಥಾಹಂದರ ಮೆದುಳನ್ನು ಬದುಕಿನ ವಿವಿಧ ಆಯಾಮಗಳ ನೆನಪುಗಳಿಗೆ ಕರೆದೊಯ್ಯುತ್ತವೆ. ಮೇಘನಾಳ ಬದುಕಿನಲ್ಲಿ ಬಂದುಹೋಗುವ ವ್ಯಕ್ತಿಗಳ ಮನಸ್ಥಿಗಳು ಒಬ್ಬರಿಗೊಬ್ಬರಿಗಿ ವಿಭಿನ್ನತೆಯಿಂದ ಕೂಡಿದ್ದು, ಮನುಷ್ಯನ ಬೇರೆಬೇರೆ ವ್ಯಕ್ತಿತ್ವ ಕತೆಯಲ್ಲಿ ಉತ್ತಮವಾಗಿ ಮೂಡಿಬಂದಿದೆ.

ಸ್ನೇಹ ಮತ್ತು ಪ್ರೀತಿಗಳು ಬೇರೆ ಬೇರೆ ಆಯಾಮಗಳನ್ನೊಂದಿದ್ದು, ಸ್ನೇಹ ಮತ್ತು ಪ್ರೀತಿಯ ನಡುವಿನ ವ್ಯತ್ಯಾಸ, ಕತೆಯಲ್ಲಿ ಸಂಕ್ಷಿಪ್ತವಾಗಿ ಹೇಳಹೊರಟಿರುವ ಲೇಖಕರ ಸೂಕ್ಷ್ಮ ವಾಸ್ತವ ಪ್ರಜ್ಞೆ ಕತೆಯಲ್ಲಿ ತೆರೆದುಕೊಂಡಿದೆ. ಭಾವನಾತ್ಮಕ ಸಂಬಂಧದ ಪ್ರಾಮುಖ್ಯತೆ, ಹಾಗೂ ಮನುಷ್ಯನ ಮನಸ್ಸಿನ ವಾಸ್ತವಿಕ ಚಿತ್ರಣ ಗಮನಸೆಳೆಯುತ್ತದೆ.

ಕತೆಯ ಮತ್ತೊಂದು ವೈಶಿಷ್ಟ್ಯವೆಂದರೆ ಕತೆ ಸಾಗುತ್ತಾ ಹೋದಂತೆ ನೈತಿಕ ಮೌಲ್ಯಗಳು ಬದುಕಿಗೆ ಎಷ್ಟು ಮುಖ್ಯ ಎಂಬುದು ಅರಿವಿಗೆ ಬರುತ್ತದೆ. 'ಮನು' ಎಂಬ ಪಾತ್ರದ ಮುಖಾಂತರ ಮದ್ಯಪಾನ, ಧೂಮಪಾನಗಳು ಜೊತೆಯಲ್ಲಿರುವ ಮತ್ತೊಂದು ಮನಸ್ಸಿನ ಮೇಲೆ ಉಂಟುಮಾಡುವ ಬೇಸರ ಮತ್ತು ತಿರಸ್ಕಾರ ಮನೋಭಾವಗಳು ಓದುಗನ ಮನಸ್ಸನ್ನು ಸಾಂಸ್ಕೃತಿಕ ಜೀವನದ ಮೌಲ್ಯಗಳತ್ತ ಚಿತ್ತ ಹರಿಸುವಂತೆ ಮಾಡುತ್ತವೆ.

ಹವ್ಯಾಸಗಳು ಹಾಗೂ ದೀರ್ಘಕಾಲಿನ ಸನ್ನಿವೇಶಗಳು ಮನಸ್ಸಿನ ಪರಿಸ್ಥಿತಿಗಳಲ್ಲಿ ಒಗ್ಗಿಕೊಳ್ಳುವಿಕೆ ಮಾಡುತ್ತವೆ, ನಿರುತ್ಸಾಹ ಬದುಕಿನ ಆಕರ್ಷಣೆಯನ್ನು ಅಳಿಸಿಹಾಕುತ್ತದೆ. ಮನಸ್ಸು ಹರೆಯದಲ್ಲಿ ಆಕರ್ಷಣೆಯಿಂದಾಗಿರುತ್ತದೆ ಎಂಬ ಸಾಮಾನ್ಯ ಅಂಶಗಳು

ಕತೆಯಿಂದ ಜಾಗೃತಗೊಳ್ಳುತ್ತಾ ಹೋಗುತ್ತದೆ. ಕತೆಯಲ್ಲಿ ಬಳಕೆಯಾಗಿರುವ ಲೇಖಕರ ಅಲಂಕಾರಿಕ ಪದಪುಂಜಗಳು, ಹೋಲಿಕೆಗಳು ಸಾಹಿತ್ಯ ವಸ್ತು ಸಮೃದ್ಧಗೊಳಿಸುವಲ್ಲಿ ಸಫಲವಾಗಿರುವುದು ಕತೆಯಲ್ಲಿ ಗೋಚರಿಸುತ್ತದೆ.

ವಾಸ್ತವ ಬದುಕಿನ ಸಮಾಜದ ಮನಸ್ಥಿತಿ, ವಸ್ತುಸ್ಥಿತಿ, ವಿಬಿನ್ನ ಮುಖಗಳ ಚಿತ್ರಣ ಕತೆಯಲ್ಲಿ ಸಾಗುತ್ತಾ ಬಂದಿದ್ದು, ಮನಸ್ಸನ್ನು ಕೇಂದ್ರೀಕರಿಸಿ ಕತೆಯ ಜೊತೆಗೆ ಸಾಗುವಂತೆ ಹಿಡಿದಿಟ್ಟುಕೊಳ್ಳುತ್ತದೆ.

ಮನುಷ್ಯನ ಜೀವನ ಸಮುದ್ರದ ಅಲೆಗಳಂತೆ ಏರಿಳಿತಗಳನ್ನೊಳಗೊಂಡಿದೆ. ಹರೆಯ – ವಯಸ್ಸುತನಗಳಲ್ಲಿ ಬೇರೆ ಬೇರೆ ಮಜಲುಗಳಿಂದ ಗೋಚರವಾಗುತ್ತದೆ. ಇಲ್ಲಿಯೂ ಸಹ ವಯಸ್ಸಿನ ವಿವಿಧ ಮುಖಗಳನ್ನು ತೋರಿಸಲಾಗಿದೆ. ಮನಸ್ಸು ಎಂಬುದು ಕಳೆದಂತೆ ಹರೆಯದ ಉತ್ಸಾಹ, ಹುಮ್ಮಸ್ಸು, ಉನ್ಮಾದಗಳಿಂದ ದೂರ ಸರಿಯುತ್ತಾ ಹೋಗುತ್ತದೆ. ಇದು ಪ್ರಕಾಶ ಮತ್ತು ಅಚಲ ಪಾತ್ರಗಳ ಮುಖಾಂತರ ಅಭಿವ್ಯಕ್ತಗೊಂಡಿದೆ.

ಕತೆಯನ್ನು ಓದುತ್ತಾ ಹೋದಂತೆಲ್ಲಾ ಲೇಖಕರ ಕೆಲವು ವೈಚಾರಿಕ ಅನುಭವಗಳು ತೆಗೆದುಕೊಂಡಂತೆ ಭಾಸವಾಗುತ್ತದೆ. ಸಮಾನ ಮನಸ್ಥಿತಿಗಳು ಒಂದಾಗುವಿಕೆ, ವಯಸ್ಸಾದಂತೆಲ್ಲಾ ಆಕರ್ಷಣೆ ಆಸಕ್ತಿಗಳು ಕ್ಷೀಣಿಸುತ್ತಾ ಹೋಗುವ ಜೊತೆಗೆ ಮನಸ್ಸಿನ ಒಳಗಡೆ ಆಸೆಗಳು ಚಿಗುರೊಡೆಯುವ ಕ್ಷಣಗಲನ್ನು ಮನಸ್ಸಿಗೆ ನಾಟುವಂತೆ ಕಟ್ಟಿಕೊಡಲಾಗಿದೆ. ಪ್ರೀತ–ಪ್ರೇಮ–ಬಾಂದವ್ಯಗಳ ಮಹತ್ವ ಎಷ್ಟು ಮುಖ್ಯ ಎಂಬ ಅಮಶಗಳು, ಪ್ರೀತಿ–ಬಾಂಧವ್ಯಗಳು ಉತ್ಸಾಹದ ಚಿಲುಮೆಗೆ ಪ್ರೇರಕಶಕ್ತಿಗಳು ಎಂಬುದು ಅಚಲಾ ಮದುವೆಗೆ ಒಪ್ಪದ ನಂತರ ಆಕೆಯಲ್ಲಿ ಆಗುವ ಬದಲಾವಣೆಗಳಿಂದ ತಿಳಿಯುತ್ತದೆ.

ಸ್ವಾರ್ಥಿ ಎಂಬುದು ಎಂಥವರನ್ನು ಸಣ್ಣವರನ್ನಾಗಿಸುತ್ತದೆ ಎಂಬುದನ್ನು ಅಚಲಾ'ಶ ಅಣ್ಣ ಅತ್ತಿಗೆಯ ಮಾತುಗಳು ಪ್ರತಿಧ್ವನಿಸುತ್ತವೆ. ಅಚಲಾಳ ಸಂಪಾದನೆಯಿಂದಲೇ ಜೀವನ ಸಾಗಿಸುತ್ತಿದ್ದ ಅಣ್ಣ–ಅತ್ತಿಗೆ ಆಕೆಯ ಮದುವೆಯೆಂಬ ವಿಷಯದಲ್ಲಿ ಸಣ್ಣತನ ಪ್ರದರ್ಶಿಸುವುದನ್ನು ಲೇಖಕರು ತಮ್ಮದೇ ಮಾತುಗಳ ಮೂಲಕ ನೈಜತೆಯ ಭಾವಕ್ಕೆ ಜೀವತುಂಬಿದ್ದಾರೆ. ಇದನ್ನು ಕಾಗೆ ಮತ್ತು ಕೋಗಿಲೆಗಳ ಸಂಬಂಧದ ಮುಖಾಂತರ ಹೇಳಿರುವುದು ಮತ್ತೊಂದು ವಿಶೇಷ.

ಕತೆಯು ಅಂತಿಮ ಹಂತಕ್ಕೆ ಹೋಗುತ್ತಿದ್ದಂತೆ ಕತೆಯ ಮತ್ತೊಂದು ಹಂತ ತಲುಪಿದ್ದರೆ ಚೆನ್ನಾಗಿರುತ್ತಿತ್ತೇನೋ ಎನಿಸುತಿದೆ. ಆದರೂ ಒಂದೇ ಮನಸ್ಥಿತಿಯ ಎರಡು ಮುಖಗಳು ಒಂದೇ ವ್ಯಕ್ತಿತ್ವ ಹೊಂದಿರುವ ಎರಡು ಭಾವನಾತ್ಮಕ ಬಂಧನಗಳು ಎಂಥಾ ವಯಸ್ಸಿನಲ್ಲೂ ಆಕರ್ಷಣೆಗೊಳಪಡಿಸುತ್ತವೆ ಎಂಬುದು ಅರ್ಥವಾಗುತ್ತದೆ. ಜೀವನದಲ್ಲಿ ಭಾವನಾತ್ಮಕ ಸಂಬಂಧಗಳು ಎಷ್ಟು ಮುಖ್ಯ ಎಂಬುದನ್ನು ಕತೆಯಲ್ಲಿ ವಿಶಿಷ್ಟವಾಗಿ ಚಿತ್ರಿಸಲಾಗಿರುವುದು ಗಮನಾರ್ಹ.

ತ್ರಿಕೋನದಾಚೆಗೆ ಕತೆಯಲ್ಲಿ ಲೇಖಕರು ಮೂರು ಹೃದಯಗಳ ನಡುವಿನ ಭಾವನೆಗಳನ್ನು ಬಿಡಿಸಿದ್ದಾರೆ. ಮಧ್ಯವಯಸ್ಸಿನಲ್ಲಿ ಮತ್ತೊಬ್ಬ ಹೆಣ್ಣಿನಲ್ಲಿ ಉಂಟಾಗುವ ಪ್ರೀತಿಯನ್ನು ವಿವರಿಸಿದ್ದಾರೆ. ಮನಸ್ಸಿನ ಮೂರು ವಿಭಿನ್ನ ಕ್ರಿಯೆಗಳನ್ನು ಪರಸ್ಪರ ಆಕರ್ಷಿಸುವ ಭಾವಗಳನ್ನು ರಂಗು-ರಂಗಿನ ಪದಗಳಲ್ಲಿ ಬಂಧಿಸಿ ಕತೆ ನಿರೂಪಿಸಲಾಗಿದೆ. ಕತೆಯ ಮಧ್ಯೆದಲ್ಲಿ ಇಣುಕುವ ಕೆಲವು ಕವನದ ಸಾಲುಗಳು ಮೆಚ್ಚುಗೆಯಾಗುತ್ತವೆ.

ಪ್ರೀತಿ ಚಿಗುರೊಡೆಯುವ ಗಳಿಗೆಯನ್ನು 'ತೆರೆಗಳು ಸರಿದಾಗ' ಕತೆಯಲ್ಲಿಯಂತೆ ಇಲ್ಲೂ ವಿಭಿನ್ನವಾಗಿ ಕೇಳಲಾರಂಬಿಸಿರುವುದು ಓದುಗನ ಮನ ತಿಳಿಯುತ್ತವೆ. ಪ್ರೀತಿಯು ಅರಳುವಾಗ- ಅರಳಿದ ನಂತರ ಮನಸಾಕ್ಷಿಯಿಂದಾಗುವ ಪ್ರಜ್ಞಾಸ್ಥಿತಿಯನ್ನು ಕತೆಯಲ್ಲಿ ತೆಗೆಯಲು ಪ್ರಯತ್ನಿಸಲಾಗಿದೆ.

ಕತೆಯ ಮತ್ತೊಂದು ಸಾಲು ತುಂಬಾ ಇಷ್ಟವಾಗುತ್ತದೆ. ನಾವು ಪ್ರೀತಿಸುವ ವ್ಯಕ್ತಿಯನ್ನು ಮತ್ತೊಬ್ಬರು ಪ್ರೀತಿಸುತ್ತಾರೆಂದು ಏಕೆ ಮನಸ್ಸನ್ನು ಕಿಚ್ಚು ಹತ್ತುತ್ತದೆ ಎಂಬುದಕ್ಕೆ ನಾವು ಪಡೆದಿರುವ ವಸ್ತು ಅತ್ಯಮೂಲ್ಯವಾದುದು ಎಂದು ನಂಬಿರುವ ಅದೇ ವಸ್ತು ಎಲ್ಲರಿಗೂ ಕೈಗೆಟಕುತ್ತದೆ ಎಂದು ತಿಳಿದಾಗ ಆಘಾತ ಉಂಟಾಗುವುದನ್ನು ಹೋಲಿಕೆಯ ಮೂಲಕ ನಿರೂಪಿಸಲಾಗಿದೆ.

ಒಬ್ಬ ವ್ಯಕ್ತಿಯ ಬಣ್ಣದ ಮಾತುಗಳನ್ನು ನಂಬಿ ಪ್ರೇಮಿಸುವ ಕಥಾ ನಾಯಕಿಯ ಸ್ಥಿತಿ ಮರಳಿನ ಮೇಲೆ ಮನೆ ಕಟ್ಟಿದಂತಿದೆ. ಹಾಗೂ ಕಥಾನಾಯಕಿಯ ಚಂಚಲತೆ, ಮುಗ್ಧತೆ ಹಾಗೂ ಚಂಚಲತೆಗಳನ್ನು ಇಲ್ಲಿ ತೆಗೆದುಕೊಂಡಿವೆ.

ಒಟ್ಟಾರೆ ನೇಮಿಚಂದ್ರರ ಕತೆಗಳಲ್ಲಿ ಸಾಂಪ್ರದಾಯಿಕ ನಿಲುವುಳ್ಳ ಸ್ತ್ರೀ ಪಾತ್ರಗಳಿಗಿಂತ ವಿದ್ಯಾವಂತ, ಅನುಕೂಲಸ್ಥ, ಆಧುನಿಕ ನಡೆನುಡಿಯುಳ್ಳ ಸ್ವಾವಲಂಬಿ

ಸ್ತ್ರೀಯರನ್ನು ಗುರುತಿಸಬಹುದು. ಸ್ತ್ರೀಯರ ಶೋಷಣೆ ಬರಿಯ ಪುರುಷರಿಂದ ಮಾತ್ರವಲ್ಲ ಸ್ತ್ರೀಯರು ಅದಕ್ಕೆ ಕೈಜೋಡಿಸುವುದರಿಂದ ಎಂಬುದನ್ನು ಬಿಂಬಿಸಿದ್ದಾರೆ.

ಸ್ತ್ರೀಯರು ತಮ್ಮ ವೈಯಕ್ತಿಕ ಹಿತಾಸಕ್ತಿಯ ಮೇಲೆ ಯಾರೇ ದಬ್ಬಾಳಿಕೆ ಮಾಡಿದರೂ ಅದನ್ನು ಪ್ರಶ್ನಿಸುವ, ವಿಚಾರಿಸುವ ಪ್ರಯತ್ನಗಳನ್ನು ಇಲ್ಲಿ ಸ್ತ್ರೀಪಾತ್ರಗಳು ಮಾಡುತ್ತವೆ.

ಒಮ್ಮೊಮ್ಮೆ ಲೇಖಕಿಯರ ವಿವರಣೆ ಅತಿ ಆಯ್ತೇನೋ ಎಂಬಷ್ಟು ಸುದೀರ್ಘವಾಗಿ ಒಂದೊಂದು ಅನುಭವವನ್ನು ಹಂಚಿಕೊಡುತ್ತಾರೆ. ಪ್ರವಾಸ ಕತೆಗಳಲ್ಲಂತೂ ಅಂಥ ವಿವರಣೆಯು ಖಂಡಿತ ಬೇಕೇ ಬೇಕು. 'ಅತಿಯಾದರೆ ಅಮೃತ ವಿಷ' ಎಂಬ ಗಾದೆಯಂತೆ ಅತಿಯಾದ ಸಂಭಾಷಣೆಗಳಿಂದ ಕತೆ ಒಮ್ಮೊಮೆ ಏಕತಾನತೆಯನ್ನು ಕಳೆದುಕೊಂಡರೂ, ಇಂತಹ ಪ್ರಯತ್ನದ ಸಂದರ್ಭದಲ್ಲಿ ನಿರೂಪಕಿ ಯಶಸ್ವಿಯಾಗಿದ್ದಾರೆ. ದಟ್ಟ ಸ್ತ್ರೀವಾದಿ ಪ್ರಜ್ಞೆ ಇರುವ ಕತೆಗಾರ್ತಿಯ ನಿಲುವು ಆಧುನಿಕ ಕನ್ನಡ ಸಾಹಿತ್ಯಕ್ಕೆ ನೀಡಿದ ಅಪೂರ್ವ ಕೊಡುಗೆ, ಅನನ್ಯತೆಯುಳ್ಳದ್ದು ಎನ್ನಬಹುದಾಗಿದೆ.

*****

# ಅಧ್ಯಾಯ – ೬

# ಉಪಸಂಹಾರ

ಆಧುನಿಕ ಕನ್ನಡ ಸಾಹಿತ್ಯದ ಪ್ರಕಾರಗಳಾದಂತಹ, ಕಾದಂಬರಿ, ಕಾವ್ಯಪ್ರಬಂಧ, ನಾಟಕ, ಆತ್ಮಕಥನ, ಕಥನಕಾವ್ಯ, ಸಂಗೀತ, ಕನ್ನಡ ಸಾಹಿತ್ಯದ ಕೃಷಿ ಶ್ರೇಷ್ಠಮಟ್ಟಕ್ಕೆ ಏರಲು ತನ್ನದೇಯಾದಂತಹ ಕೊಡುಗೆಗಳನ್ನು ನೀಡಿದವು. ಈ ಬೆಳವಣಿಗೆಯಲ್ಲಿ ಸಣ್ಣಕತೆಯು ಒಂದು ಹೊಚ್ಚ ಹೊಸ ಸಾಹಿತ್ಯ ಪ್ರಕಾರವಾಗಿದೆ. ಈ ಪರಿಕಲ್ಪನೆ ಪ್ರಾಚೀನ ಕನ್ನಡ ಸಾಹಿತ್ಯದ ಕೃಷಿಯಲ್ಲಿಯೇ ಗೋಚರಿಸಿದರು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಜನಪ್ರಿಯತೆಯನ್ನು ಪಡೆದುಕೊಂಡಿತು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ದಲಿತ–ಬಂಡಾಯ ಸಾಹಿತ್ಯದಲ್ಲಿ ಅನೇಕ ಸಾಹಿತಿಗಳು ಕತೆಗಳನ್ನು ರಚಿಸಿದ್ದಾರೆ. ಬರಗೂರು ರಾಮಚಂದ್ರಪ್ಪ, ದೇವನೂರು ಮಹಾದೇವ, ಕಾಳೇಗೌಡ ನಾಗವಾರ, ಮೊಗಳ್ಳಿ ಗಣೇಶ್, ಕುಂ.ವೀರಭದ್ರಪ್ಪ ಪ್ರಮುಖವಾಗಿ ನೇಮಿಚಂದ್ರರವರು. ಈ ಹಿನ್ನೆಲೆಯಲ್ಲಿ ಸಾಮಾಜಿಕ ಕೌಟುಂಬಿಕ ಭಾವನೆಗಳು, ಅಭಿಪ್ರಾಯಗಳನ್ನು ಅಭಿವ್ಯಕ್ತಿಸಿದ್ದಾರೆ.

ನೇಮಿಚಂದ್ರವರ 'ಇಲ್ಲಿಯವರೆಗಿನ ನೇಮಿಚಂದ್ರರ ಕತೆಗಳಲ್ಲಿ ಎಂಬ ಕೃತಿಯಲ್ಲಿ ಮಹಿಳೆಯರ ಸ್ಥಾನಮಾನ, ನೋವು ನಲಿವುಗಳ ಭಾವನೆಗಳ ಬಗ್ಗೆ ತುಮುಲಗಳ ಬಗ್ಗೆ ಸ್ತ್ರೀ ಮತ್ತು ಪುರುಷ ವ್ಯಕ್ತಿತ್ವ ಅನಾವರಣ ಕತೆಗಳಲ್ಲಿ ಕಂಡುಬರುತ್ತದೆ.

ನೇಮಿಚಂದ್ರರವರ ಬರವಣಿಗೆ ಬಹಳ ಅಪರೂಪದ್ದು ಎಂಬುದಾಗಿಯೇ ಹೇಳಬಹುದು. ಅವರ ಕತೆಗಳಲ್ಲಿ ತೀವ್ರತರವಾದ ಸಾಮಾಜಿಕ ಕಳಕಳಿ, ನೇಮಿಚಂದ್ರ–ರವರ ಕಥಾಸಾಹಿತ್ಯದಲ್ಲಿ ಹಾಸುಹೊಕ್ಕಾಗಿದೆ. ಇವರ ಒಟ್ಟು ಕಥಾಸಾಹಿತ್ಯದಲ್ಲಿ ಅಧ್ಯಾಯದ ಬಗೆಗಿನ ಸಾಮಾಜಿಕ ಹುಳುಕುಗಳ ಬಗ್ಗೆ ಹಾಗೂ ಕೌಟುಂಬಿಕ ಅಭಿಪ್ರಾಯಗಳ ಬಗ್ಗೆ ಪ್ರಧಾನವಾಗಿ ಕಂಡುಬರುತ್ತದೆ.

ಕುಟುಂಬವನ್ನು, ಜನರ ಮನಸ್ಸನ್ನು ಬದಲಾಯಿಸಲು ಸಾಧ್ಯವಿದೆ ಎಂಬುದನ್ನು ನೇಮಿಚಂದ್ರರವರ ಕತೆಗಳಲ್ಲಿ ಅನಾವರಣಗೊಳ್ಳುತ್ತದೆ. ಸಮಾಜಮುಖಿ, ಸ್ನೇಹಮುಖಿ–ಗಳಾಗಿ, ಸಮಾಜವನ್ನು ಬದಲಾವಣೆಯತ್ತ ಕೊಂಡೊಯ್ಯುವ ಪ್ರಯತ್ನಪಟ್ಟಿದ್ದಾರೆ.

ಇಪ್ಪತ್ತನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯ ಗರಿಗೆದರಿಕೊಂಡು ದಶದಿಕ್ಕುಗಳಲ್ಲಿ ಹಾರಾಡಿತೆಂದರೆ ಅತಿಶಯೋಕ್ತಿಯಲ್ಲ. ಗುಣ ಮತ್ತು ಗಾತ್ರಗಳೆರಡು ದೃಷ್ಟಿಗಳಿಂದಲೂ ಕನ್ನಡ ಸಾಹಿತ್ಯ ನಿರೀಕ್ಷೆಗೆ ಮೀರಿ ಬೆಳೆಯಿತು. ಪಾಶ್ಚಿಮಾತ್ಯರ ಸಾಹಿತ್ಯದಿಂದ ಪ್ರಭಾವಗೊಂಡರು. ತನ್ನತನವನ್ನು ಮೆರೆದ ಕಾಲವಿದು. ಈಗ ಕನ್ನಡದಲ್ಲಿ ದಿನಕ್ಕೆ ನಾಲ್ಕಾರು ಪುಸ್ತಕಗಳು ಪ್ರಕಟವಾಗುತ್ತವೆ. ಸಾಹಿತಿಗಳ ಸಂಖ್ಯೆ ಗಣನೀಯವಾಗಿದೆ. ಆದ್ದರಿಂದಲೇ ಜ್ಞಾನಪೀಠ ಪ್ರಶಸ್ತಿ ಮತ್ತೆ ಮತ್ತೆ ಕನ್ನಡಕ್ಕೆ ಲಭ್ಯವಾಗುತ್ತಿದೆ. ಈ ನಿಟ್ಟಿನಲ್ಲಿ ಕನ್ನಡ ಸಾಹಿತ್ಯ ಕೃಷಿ ಕ್ಷೇತ್ರಕ್ಕೆ ನೇಮಿಚಂದ್ರರವರ ಸಣ್ಣಕತೆಗಳು ಅತ್ಯಾಮೂಲ್ಯವಾದ ಕೊಡುಗೆಯನ್ನು ಕೊಟ್ಟಿದೆ.

ಸಮಾಜದ ಪ್ರತಿಯೊಬ್ಬ ನಾಗರಿಕನು ಕಣ್ತೆಯದ ಹೊರತು ಈ ಸಾಮಾಜಿಕ ಪಿಡುಗುಗಳು ಅಂತ್ಯ ಕಾಣುವುದಿಲ್ಲ. ಕಾನೂನಿನ ಚೌಕಟ್ಟನ್ನು ಎಷ್ಟೇ ವಿಸ್ತರಿಸಿದರೂ ಅದನ್ನು ಮೀರಿ ನಿಲ್ಲಬಲ್ಲ ಸಾಮರ್ಥ್ಯ ಇಂದಿನ ಜನತೆಯಲ್ಲಿ ಬಿಂಬಿತವಾಗುತ್ತಿದೆ. ಈ ದುಷ್ಟ ಪದ್ಧತಿಯ ಬುಡಕ್ಕೆ ಕೊಡಲಿ ಚಿಪ್ಪನ್ನು ಕೊಡುವ ದಿಟ್ಟ ಹೆಜ್ಜೆಯಿಡುವ ಸಾಹಸದಲ್ಲಿ ಸಮಾಜ ಟೊಂಕಕಟ್ಟಿ ನೇಮಿಚಂದ್ರರವರ ಕತೆಗಳ ಮುಖೇನ ಶ್ರಮಿಸಿದ್ದಾರೆ ಎಂದು ಹೇಳಬಹುದು.

ಮನುಷ್ಯನ ಮನಸ್ಸು ಯಾವಾಗಲೂ ಅರಿಷಡ್ವರ್ಗಗಳು ಪ್ರಭಾವದಿಂದ ನಲುಗುತ್ತಿರುತ್ತದೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ತರಗಳನ್ನೇ ಅರಿಷಡ್ವರ್ಗಗಳು – ಮನಸ್ಸಿನ ಆರು ಶತ್ರುಗಳು ಎಂದು ಕರೆಯುವರು. ಕೋಪದ ವಿರುದ್ಧ ಭಾವವೇ ತಾಳ್ಮೆ, ಕೋಪಬರುವಂತಹ ಸನ್ನಿವೇಶಗಳು ಜೀವನದಲ್ಲಿ ಪ್ರತಿನಿತ್ಯ ಹಲವಾರು ಬಾರಿ ಬರುತ್ತಿರುತ್ತವೆ. ಆದರೆ ಕೋಪಾವೇಶದಿಂದ ಆಡುವ ಮಾತು, ಮಾಡುವ ಕ್ರಿಯೆಗಳಿಂದ ಅನಾಹುತ ಹಾನಿಯಾಗುವ ಸಂಭವ ಎಂತು. ಆದ್ದರಿಂದ ತಾಳ್ಮೆಯಿಂದ ಯಾವ ರೀತಿ ಎದುರಿಸಬೇಕೆನ್ನುವ ಕುರಿತು ಕತೆಗಳನ್ನು ಓದಿದಾಗ ನಮಗನಿಸುತ್ತದೆ.

ವೃತ್ತಿಯಿಂದ ತಂತ್ರಜ್ಞರಾಗಿ ಪ್ರವೃತ್ತಿಯಲ್ಲಿ ಸಾಹಿತಿಯಾಗಿರುವ ಕತೆಗಾರ್ತಿ ನೇಮಿಚಂದ್ರರವರ ಕತೆಗಳು ಸದಾ ಚಿಂತನೆಗೆ, ವಿಚಾರಸಂಕಿರಣಕ್ಕೆ ವಿಮರ್ಶೆಗೆ ಹಚ್ಚುವಂತಹವು. ಯಾವುದೇ ವಿಷಯವನ್ನು ವಿಶಿಷ್ಟ ಪ್ರಕಾರದಲ್ಲಿ ಚಿಂತನೆ ನಡೆಸಬಹುದು ಎಂಬುದನ್ನು ಇವರ ಕತೆಗಳು ಕಟ್ಟಿಕೊಡುತ್ತವೆ. ಸ್ತ್ರೀವಾದಿ

ಧೋರಣೆಯುಳ್ಳ, ಜೊತೆಗೆ ಕ್ವಚಿತ್ತಾಗಿ ಹೆಣ್ತನ, ತಾಯ್ತನ ಕಾಣಿಸಿಕೊಳ್ಳುವ ಜೊತೆಗೆ ಕ್ರಿಯಾಶೀಲ ಮಹಿಳೆಯರ ಕತೆಗಳನ್ನು ಗುರುತಿಸಿ ವಿವರಿಸುವ ಪ್ರಯತ್ನವನ್ನು ಇಲ್ಲಿ ನಡೆಸಿರುತ್ತೇನೆ. ಉದ್ಯೋಗಸ್ಥ ಮಹಿಳೆಯರ ಯಾಂತ್ರಿಕ ಬದುಕಿನಲ್ಲಿನ ಬಗೆಗಿನ ಕಾತುರ, ತಳಮಳಗಳನ್ನು ಈ ಮುಖೇನ ಕಂಡುಕೊಂಡಿರುತ್ತೇನೆ.

# ಗ್ರಂಥಋಣ


| | |
|---|---|
| ೧. ಕೀರ್ತಿನಾಥ ಕುರ್ತಕೋಟಿ | ಯುಗಧರ್ಮ ಹಾಗೂ ಸಾಹಿತ್ಯದರ್ಶನ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೮೩. |
| ೨. ಡಾ. ಕರೀಗೌಡ ಬೀಚನಹಳ್ಳಿ | ಶತಮಾನದ ಸಣ್ಣಕತೆಗಳ ಸಮೀಕ್ಷೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು, ೨೦೦೩. |
| ೩. ತ.ಸು.ಶಾಮರಾಯ | ಕನ್ನಡ ಸಾಹಿತ್ಯ ಚರಿತ್ರೆ, ತಳುಕು ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೂರನೇ ಹಂತ, ಮೈಸೂರು –೩. |
| ೪. ಕುವೆಂಪು | ನನ್ನ ದೇವರ ಮತ್ತು ಇತರೆ ಕತೆಗಳು, ಉದಯರವಿ ಪ್ರಕಾಶನ, ವಾಣೀವಿಲಾಸ–ಪುರಂ, ಮೈಸೂರು–೩. |
| ೫. ಎಲ್.ಎಸ್.ಶೇಷಗಿರಿರಾವ್ | ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ ಬೆಂಗಳೂರು, ೨೦೦೭. |
| ೬. ಕನ್ನಡ ಸಾಹಿತ್ಯ ಸಂಗಾತಿ | ಕೀರ್ತಿನಾಥ ಕುರ್ತಕೋಟಿ |
| ೭. ಕನ್ನಡ ಸಾಹಿತ್ಯಕೋಶ | ರಾಜಪ್ಪ ದಳವಾಯಿ |
| ೮. ಡಾ. ಡಿ.ಸುಮಂಗಳ | ಆಧುನಿಕ ಮಹಿಳಾ ಸಣ್ಣಕತೆಗಳಲ್ಲಿ ಪ್ರತಿಭಟನೆಯ ವಿನ್ಯಾಸಗಳು |
| ೯. ನೇಮಿಚಂದ್ರ | ಮೇರಿಕ್ಯೂರಿ (ವ್ಯಕ್ತಿ ಚಿತ್ರಣ), ಅಂಕಿತ ಪ್ರಕಾಶನ. |
| ೧೦. ನೇಮಿಚಂದ್ರ | ಡಾ. ಈಡಾ ಸೋಫಿಯಾ ಸ್ಕಡರ್ (ವ್ಯಕ್ತಿ ಚಿತ್ರಣ), ಅಂಕಿತ ಪ್ರಕಾಶನ. |
| ೧೧. ವ್ಯಾಸರಾಯ ಬಲ್ಲಾಳ | ವ್ಯಾಸರಾಯ ಬಲ್ಲಾಳರ ಸಮಗ್ರ ಕತೆಗಳು, ಅಂಕಿತ ಪ್ರಕಾಶನ. |
| ೧೨. ನೇಮಿಚಂದ್ರ | ನೇಮಿಚಂದ್ರರ ಕತೆಗಳು, ಅಂಕಿತ ಪ್ರಕಾಶನ. |
| ೧೩. ಎಸ್.ದಿವಾಕರ್ | ಎಲ್ಲಾ ಬಲ್ಲವರಿಲ್ಲ ಈ ಊರಿನಲ್ಲಿ, ಅಂಕಿತ ಪ್ರಕಾಶನ. |